# ದಿಕ್ರ್, ತಸ್ಬೀಹ್
# ದುಆ

ಇಮಾಮ್ ಹಸನುಲ್ ಬನ್ನಾ ಶಹೀದ್

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

'ಪ್ರವಾದಿಗಳ ಶಿಕ್ಷಣದಲ್ಲಿ ಸಂದೇಶ ಪ್ರಚಾರ (ದಅ್‌ವತ್) ಮತ್ತು ಸಂಸ್ಕರಣೆಗೆ (ಇಸ್ಲಾಹ್) ಬಹಳ ಮಹತ್ವ ಕಲ್ಪಿಸಲಾಗಿದೆ. ತಮ್ಮ ಕರೆಯನ್ನು ಸ್ವೀಕರಿಸಿ ಅನುಯಾಯಿಗಳಾಗುವವರನ್ನು ಅವರು ಸಂಸ್ಕರಿಸುತ್ತಿದ್ದರು. ಅತ್ಯುನ್ನತ ಉದ್ದೇಶಕ್ಕಾಗಿ (ಇಕಾಮತುದ್ದೀನ್ ಅಥವಾ ಧರ್ಮ ಸಂಸ್ಥಾಪನೆ) ಅಣಿಗೊಳಿಸುವುದಕ್ಕಾಗಿ ಪ್ರತಿಯೊಬ್ಬನೂ ಆಂತರಿಕವಾಗಿ ಪರಿಶುದ್ಧನಾಗಿರಬೇಕಾದುದು ಮುಖ್ಯ. ಹೃದಯ ಶುದ್ಧೀಕರಣಕ್ಕಾಗಿ ಪ್ರವಾದಿ ಮುಹಮ್ಮದ್(ಸ) ಅವರು ಸಮುದಾಯಕ್ಕೆ ಅನೇಕ ದಿಕ್ರ್, ತಸ್ಬೀಹ್, ದುಆಗಳನ್ನೂ ಕಡ್ಡಾಯ ಕರ್ಮಗಳ ಹೊರತಾಗಿ ಐಚ್ಛಿಕ ಆರಾಧನೆಗಳನ್ನೂ ಕಲಿಸಿಕೊಟ್ಟಿದ್ದಾರೆ.

ಮಾನವನ ಹೃದಯವು ಒಳಿತು-ಕೆಡುಕುಗಳ ತಾಣವಾಗಿದೆ. ಅದು ಒಳಿತಿನತ್ತ ಮಾನವನನ್ನು ಒಯ್ಯಬೇಕಾದರೆ ಅದನ್ನು ಸದಾ ಸಂಸ್ಕರಿಸುವುದು ಅಗತ್ಯವಾಗಿದೆ. ಪ್ರವಾದಿ ಮುಹಮ್ಮದ್(ಸ) ಹೇಳಿದರು. ಮಾನವ ಶರೀರದಲ್ಲಿ ಒಂದು ಮಾಂಸದ ಮುದ್ದೆಯಿದೆ. ಅದು ಸರಿಯಾಗಿದ್ದರೆ ಇಡೀ ಶರೀರವು ಶುದ್ಧವಾಗಿರುತ್ತದೆ. ಅದು ಕೆಟ್ಟು ಹೋದರೆ ಇಡೀ ಶರೀರ ಕೆಟ್ಟು ಹೋಗುತ್ತದೆ. ಅದುವೇ ಹೃದಯ.

ದಿಕ್ರ್, ತಸ್ಬೀಹ್ ದುಆ ಎಂಬ ಈ ಕೃತಿಯಲ್ಲಿ ಮಾನವನ ಆತ್ಮ ಮತ್ತು ಹೃದಯವನ್ನು ಶುದ್ಧೀಕರಿಸುವಂತಹ ಅನೇಕ ಕುರ್‌ಆನ್ ಸೂಕ್ತಗಳು, ಅನೇಕ ದಿಕ್ರ್-ತಸ್ಬೀಹ್-ದುಆಗಳನ್ನು ಕ್ರೋಡೀಕರಿಸಲಾಗಿದೆ. ಈ ಕೃತಿಯು ಇಸ್ಲಾಮಿನ ಸೇವೆಯಲ್ಲಿ ನಿರತರಾಗಿರುವ ಎಲ್ಲರಿಗೂ ಸ್ಫೂರ್ತಿಯ ಸೆಲೆಯಾಗಿದೆ. ಜನಸಾಮಾನ್ಯರೂ ಇದರ ಪ್ರಯೋಜನ ಪಡೆಯುವಂತಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

## ಅನುಕ್ರಮಣಿಕೆ

يَا أَيُّهَا الَّذِينَ آمَنُوا اذْكُرُوا اللَّهَ ذِكْرًا
كَثِيرًا ﴿٤١﴾ وَسَبِّحُوهُ بُكْرَةً وَ
أَصِيلًا ﴿٤٢﴾

ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಬಹಳವಾಗಿ ಸ್ಮರಿಸಿರಿ ಮತ್ತು ಬೆಳಗು ಬೈಗುಗಳಲ್ಲಿ ಅವನ ಗುಣಗಾನ ಮಾಡುತ್ತಲಿರಿ.

(ಪವಿತ್ರ ಕುರ್‌ಆನ್, 33: 41-42)

# ಸಮಗ್ರ ದೇವಸ್ಮರಣೆ

## (ಎಲ್ಲ ಸ್ಥಿತಿಯಲ್ಲೂ ದೇವಸ್ಮರಣೆ)

اَلْحَمْدُ لِلّٰهِ رَبِّ الْعٰلَمِيْنَ وَ صَلَّى اللّٰهُ عَلٰى سَيِّدِنَا مُحَمَّدٍ اَفْضَلَ الذَّاكِرِيْنَ وَ سَيِّدِ الشَّاكِرِيْنَ، وَ اِمَامِ الْمُرْسَلِيْنَ وَ خَاتِمِ النَّبِيِّيْنَ وَ قَائِدِ الْغُرِّ الْمُحَجَّلِيْنَ، وَ عَلٰى اٰلِهٖ وَ اَصْحَابِهٖ اَجْمَعِيْنَ، وَ مَنْ سَلَكَ طَرِيْقَهُمْ اِلٰى يَوْمِ الدِّيْنِ۔

ಆತ್ಮೀಯ ಬಂಧುಗಳೇ, ಅಲ್ಲಾಹನು ನನಗೆ ಮತ್ತು ನಿಮಗೆ ಅತ್ಯುತ್ತಮ ಸತ್ಕರ್ಮಗಳನ್ನೆಸಗುವ ಸೌಭಾಗ್ಯ ಕರುಣಿಸಲಿ. ಪ್ರತಿಯೊಬ್ಬ ಮನುಷ್ಯನಿಗೂ ಜೀವನದಲ್ಲಿ ಯಾವುದಾದರೊಂದು ಮೂಲಭೂತ ಉದ್ದೇಶವಿರುತ್ತದೆ ಎಂಬುದನ್ನು ನಾವು ತಿಳಿದಿರಬೇಕು. ಅದರ ಸುತ್ತ ಆತನ ಚಿಂತನೆಗಳು ತಿರುಗುತ್ತಿರುತ್ತವೆ. ಈ ಉದ್ದೇಶಗಳೇ ಆತನ ಎಲ್ಲ ಕೆಲಸ ಕಾರ್ಯಗಳು, ಕರ್ಮಗಳು ಮತ್ತು ಆಕಾಂಕ್ಷೆಗಳ ಕೇಂದ್ರವಾಗಿರುತ್ತದೆ. ಅವುಗಳನ್ನೇ ಆತನು ತನ್ನ ಪರಮೋನ್ನತ ಮಾನದಂಡವಾಗಿ ಪರಿಗಣಿಸುತ್ತಾನೆ. ಜೀವನದ ಈ ಉದ್ದೇಶವು ನಿಜವಾಗಿಯೂ ಪರಮೋನ್ನತವಾಗಿದ್ದರೆ ಮನುಷ್ಯ ಉನ್ನತಿಗೇರುವನು ಮತ್ತು ಅತ್ಯುತ್ತಮ ಚಾರಿತ್ರ್ಯ ಮತ್ತು ಶಿಷ್ಟಾಚಾರ ಸತ್ಕರ್ಮಗಳು ಪ್ರಕಟವಾಗುವುದು ಹಾಗೂ ಅವುಗಳನ್ನು ಪಾಲಿಸುವವನು ತನ್ನ ವಿಧಿ ಪ್ರಕಾರ ಆಧ್ಯಾತ್ಮಿಕ ಉನ್ನತ ದರ್ಜೆಗೇರಬಲ್ಲನು.

ಇಸ್ಲಾಮ್ ಮಾನವಕುಲದ ಸುಧಾರಣೆ, ಅದರ ಸಂಸ್ಕರಣೆ ಮತ್ತು ಎಲ್ಲ ರೀತಿಯಲ್ಲೂ ಪರಮೋನ್ನತ ಮಟ್ಟಕ್ಕೇರಿಸಲು ಬಂದಿರುತ್ತದೆ. ಇಸ್ಲಾಮ್ ಸಕಲ ಮನುಷ್ಯರ ಜೀವನದ ವಾಸ್ತವಿಕತೆ ಮತ್ತು ಪರಮ ಉದ್ದೇಶಗಳನ್ನು ಸ್ಪಷ್ಟೀಕರಿಸಿದೆ. ಅದು ಜನರನ್ನು ಒಳಿತಿನ ಅತ್ಯುನ್ನತ ಸ್ಥಾನಕ್ಕೆ ಕೊಂಡೊಯ್ಯ ಬಯಸುತ್ತದೆ. ಅದನ್ನು ಅಲ್ಲಾಹನು ಉಪದೇಶಿಸುತ್ತಾ ಈ ರೀತಿ ಹೇಳುತ್ತಾನೆ:

فَفِرُّوْٓا اِلَى اللّٰهِ ۭ اِنِّىْ لَكُمْ مِّنْهُ نَذِيْرٌ مُّبِيْنٌ۝

"ಆದುದರಿಂದ ನೀವು ಅಲ್ಲಾಹನ ಕಡೆಗೆ ಧಾವಿಸಿರಿ. ನಾನು ನಿಮಗೆ ಅವನ ಕಡೆಯಿಂದ ಸುವ್ಯಕ್ತ ಎಚ್ಚರಿಕೆ ನೀಡುವವನಾಗಿದ್ದೇನೆ.[1] (ಪವಿತ್ರ ಕುರ್‌ಆನ್, 51:50)

ಆತ್ಮೀಯ ಬಂಧುಗಳೇ, ಈ ವಾಸ್ತವಿಕತೆಯನ್ನು ಅರಿತ ಬಳಿಕ ಅಲ್ಲಾಹನ ಸ್ಮರಣೆಯನ್ನು ಮುಸ್ಲಿಮರು ಎಲ್ಲ ಸ್ಥಿತಿಯಲ್ಲೂ ಮಾಡಬೇಕಾಗಿರುವುದರಲ್ಲಿ ಆಶ್ಚರ್ಯ ಪಡಬೇಕಾಗಿಲ್ಲ. ಸೃಷ್ಟಿಗಳಲ್ಲಿ ತನ್ನ ಪ್ರಭುವನ್ನು ಅತೀ ಹೆಚ್ಚು ತಿಳಿದಿದ್ದಂತಹ ಪ್ರವಾದಿ ಮುಹಮ್ಮದ್‌ರ(ಸ) ದೇವಸ್ಮರಣೆ, ಪ್ರಾರ್ಥನೆ, ಕೃತಜ್ಞತೆ, ದಿಕ್ರ್, ಗುಣಗಾನ, ಸ್ತುತಿಸ್ತೋತ್ರಗಳ ವೈಭವಪೂರಿತ ಮತ್ತು ಪ್ರಬುದ್ಧ ವಚನಗಳನ್ನು ಕಲಿಸಿಕೊಟ್ಟಿರುವುದರಲ್ಲೂ ಆಶ್ಚರ್ಯ ಪಡಬೇಕಾಗಿಲ್ಲ. ಪ್ರವಾದಿವರ್ಯರು(ಸ) ಜೀವನದ ಚಿಕ್ಕ-ದೊಡ್ಡ-ಸಾಮಾನ್ಯ ವಿಶೇಷ ಸಂದರ್ಭಗಳಲ್ಲಿ ಪ್ರತಿಯೊಂದು ವಿಷಯದಲ್ಲೂ ಅಲ್ಲಾಹನನ್ನು ಸ್ಮರಿಸುತ್ತಿದ್ದರು.[2]

ಮುಸ್ಲಿಮ್ ಸಮುದಾಯದ ಪ್ರತಿಯೊಬ್ಬನೂ ಪ್ರತಾಪಿಯೂ ಕ್ಷಮಾಳುವೂ ಆದ ದೇವನ ಸಾಮಿಪ್ಯ ಗಳಿಸಲು ಪ್ರವಾದಿಯವರ(ಸ) ಚರ್ಯೆ ಪಾಲಿಸಬೇಕೆಂದು ವಿನಂತಿಸುತ್ತೇನೆ. ಅವರು ತೋರಿದ ಮಾರ್ಗದರ್ಶನದಂತೆ ಕರ್ಮಗಳನ್ನೆಸಗ ಬೇಕು ಮತ್ತು ಪ್ರಾರ್ಥನೆಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಅಲ್ಲಾಹನು ಹೇಳುತ್ತಾನೆ.

لَقَدْ كَانَ لَكُمْ فِىْ رَسُوْلِ اللّٰهِ اُسْوَةٌ حَسَنَةٌ لِّمَنْ كَانَ يَرْجُوا
اللّٰهَ وَالْيَوْمَ الْاٰخِرَ وَ ذَكَرَ اللّٰهَ كَثِيْرًا۝

"ನಿಶ್ಚಯವಾಗಿಯೂ ಅಲ್ಲಾಹ್‌ನ ಸಂದೇಶವಾಹಕರಲ್ಲಿ ನಿಮಗಾಗಿ ಒಂದು ಅತ್ಯುತ್ತಮ ಮಾದರಿ ಇತ್ತು. (ಇದು) ಅಲ್ಲಾಹ್ ಹಾಗೂ ಅಂತಿಮ ದಿನವನ್ನು ನಿರೀಕ್ಷಿಸುವವನಿಗೆ ಮತ್ತು ಅಲ್ಲಾಹನನ್ನು ಬಹಳ ಸ್ಮರಿಸುವವನಿಗೆ." (ಪವಿತ್ರ ಕುರ್‌ಆನ್, 33:21)

## ದಿಕ್ರ್ ಮತ್ತು ದಿಕ್ರ್ ಮಾಡುವವರ ಶ್ರೇಷ್ಠತೆ

ಪವಿತ್ರ ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಪ್ರವಾದಿಯವರು(ಸ) ಅಲ್ಲಾಹನನ್ನು ಅತ್ಯಧಿಕ ಸ್ಮರಿಸುವ ಕುರಿತು ವಿಶೇಷ ಗಮನ ಹರಿಸಲಾಗಿದೆ. ದೇವಸ್ಮರಣೆಯ ಶ್ರೇಷ್ಠತೆಯನ್ನು ಬಹಳ ಒತ್ತುಕೊಟ್ಟು ಬಣ್ಣಿಸಲಾಗಿದೆ. ದಿಕ್ರ್ ಮಾಡುತ್ತಾ ಇರುವವರ ಸ್ಥಾನಮಾನ ಅಲ್ಲಲ್ಲಿ ಸ್ಪಷ್ಟಗೊಳಿಸಲಾಗಿದೆ. ಈ ಭೂಮಿಯಲ್ಲಿ ಜೀವಿಸುತ್ತಿರುವ ತನ್ನ ಸಜ್ಜನ ದಾಸರ ಗುಣ ವಿಶೇಷತೆಗಳನ್ನು ಎಣಿಸುತ್ತಾ ದಿಕ್ರ್ ಮಾಡುವವರ ಬಗ್ಗೆ ದೇವವಚನಗಳನ್ನು ಕೊನೆಗೊಳಿಸುತ್ತಾನೆ.

1. ಫಫಿರ್ರೂಇಲಲ್ಲಾಹ್:- ಅರ್ಥಾತ್ ಅಲ್ಲಾಹನ ಯಾತನೆಯಿಂದ ಆತನ ಭವ್ಯ ಕೊಡುಗೆಗಳು ಮತ್ತು ಗೌರವಾದರಗಳ ಕಡೆಗೆ ಧಾವಿಸಿರಿ.

2. ಹ.ಆಯಿಶಾರಿಂದ(ರ) ವರದಿಯಾದ ಪ್ರವಾದಿ ವಚನಗಳು: ಪ್ರವಾದಿ(ಸ) ಪ್ರತಿಕ್ಷಣ ಅಲ್ಲಾಹನನ್ನು ಸ್ಮರಿಸುತ್ತಿದ್ದರು. (ಮುಸ್ಲಿಮ್, ಅಬೂದಾವೂದ್, ತಿರ್ಮಿದಿ)

إِنَّ الْمُسْلِمِينَ وَالْمُسْلِمٰتِ وَالْمُؤْمِنِينَ وَالْمُؤْمِنٰتِ وَالْقٰنِتِينَ
وَالْقٰنِتٰتِ وَالصّٰدِقِينَ وَالصّٰدِقٰتِ وَالصّٰبِرِينَ وَالصّٰبِرٰتِ
وَالْخٰشِعِينَ وَالْخٰشِعٰتِ وَالْمُتَصَدِّقِينَ وَالْمُتَصَدِّقٰتِ وَالصّٰٓئِمِينَ
وَالصّٰٓئِمٰتِ وَالْحٰفِظِينَ فُرُوجَهُمْ وَالْحٰفِظٰتِ وَالذّٰكِرِينَ
اللّٰهَ كَثِيرًا وَّالذّٰكِرٰتِ اَعَدَّ اللّٰهُ لَهُمْ مَّغْفِرَةً وَّ اَجْرًا عَظِيمًا۝

"ನಿಶ್ಚಯವಾಗಿಯೂ ಮುಸ್ಲಿಮರು ಸತ್ಯವಿಶ್ವಾಸಿಗಳೂ ಆಜ್ಞಾಪಾಲಕರೂ ಸತ್ಯಸಂಧರೂ ಸಹನಶೀಲರೂ ವಿನಮ್ರರೂ ದಾನಶೀಲರೂ ಉಪವಾಸ ವ್ರತವನ್ನಾಚರಿಸುವವರೂ ತಮ್ಮ ಗುಪ್ತಾಂಗಗಳ ರಕ್ಷಣೆ ಮಾಡಿಕೊಳ್ಳುವವರೂ ಅಲ್ಲಾಹನನ್ನು ಅತ್ಯಧಿಕ ಸ್ಮರಿಸುವವರೂ ಆದ ಎಲ್ಲಾ ಪುರುಷರು ಮತ್ತು ಸ್ತ್ರೀಯರಿಗೆ ಅಲ್ಲಾಹನು ಕ್ಷಮೆ ಮತ್ತು ಅತಿ ದೊಡ್ಡ ಸತ್ಫಲವನ್ನು ಸಿದ್ಧಗೊಳಿಸಿಟ್ಟಿದ್ದಾನೆ." (ಪವಿತ್ರ ಕುರ್‌ಆನ್, 33:35)

ಇನ್ನೊಂದು ಕಡೆಯಲ್ಲಿ ಅಲ್ಲಾಹನು ಸತ್ಯವಿಶ್ವಾಸಿಗಳಿಗೆ ಈ ರೀತಿ ಉಪದೇಶಿಸುತ್ತಾನೆ.

يٰٓاَيُّهَا الَّذِينَ اٰمَنُوا اذْكُرُوا اللّٰهَ ذِكْرًا كَثِيرًا۝ وَّ سَبِّحُوهُ
بُكْرَةً وَّ اَصِيلًا۝

"ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಬಹಳವಾಗಿ ಸ್ಮರಿಸಿರಿ ಮತ್ತು ಬೆಳಗುಬೈಗುಗಳಲ್ಲಿ ಅವನ ಗುಣಗಾನ ಮಾಡುತ್ತಲಿರಿ." (ಪವಿತ್ರ ಕುರ್‌ಆನ್, 33:41-42)

ಬಹಳಷ್ಟು ಹದೀಸ್‌ಗಳಲ್ಲಿ ದಿಕ್ರ್‌ನ ಮಹತ್ವಗಳನ್ನು ತಿಳಿಸಲಾಗಿದೆ.

ಖುದ್ಸಿ ಹದೀಸ್‌ನ ಪದಗಳು ಈ ರೀತಿಯಲ್ಲಿವೆ:-

اَنَا عِنْدَ ظَنِّ عَبْدِي بِي وَ اَنَا مَعَهُ اِذَا ذَكَرَنِي فَاِنْ ذَكَرَنِي فِي
نَفْسِهِ ذَكَرْتُهُ فِي نَفْسِي وَ اِنْ ذَكَرَنِي فِي مَلَاءٍ ذَكَرْتُهُ فِي
مَلَاءٍ خَيْرٍ مِنْهُمْ۔

ನನ್ನ (ಸತ್ಯವಿಶ್ವಾಸಿ) ದಾಸನು ನನ್ನ ಬಗ್ಗೆ ಯಾವ ರೀತಿಯ ನಂಬಿಕೆ ಇರಿಸುತ್ತಾನೋ ನನ್ನನ್ನು ಹಾಗೆಯೇ ಕಾಣುವನು. ಅವನು ನನ್ನನ್ನು ಸ್ಮರಿಸುವಾಗ ನಾನು ಅವನ ಜೊತೆಗಿರುತ್ತೇನೆ. ಅವನು ನನ್ನನ್ನು ಏಕಾಂತದಲ್ಲಿ (ರಹಸ್ಯವಾಗಿ) ಸ್ಮರಿಸುವಾಗ ನಾನೂ

ಅವನನ್ನು ಏಕಾಂತದಲ್ಲಿ ಸ್ಮರಿಸುತ್ತೇನೆ. ಅವನು ನನ್ನನ್ನು ಜನರ ಗುಂಪಿನಲ್ಲಿ ಸ್ಮರಿಸುವಾಗ ನಾನು ಅವನನ್ನು ಮಾನವರಿಗಿಂತ ಉತ್ತಮವಾದವರ(ದೇವಚರರ) ಗುಂಪಿನಲ್ಲಿ ಸ್ಮರಿಸುತ್ತೇನೆ. (ಮುತ್ತಫಕುನ್ ಅಲೈಹಿ)

ಹ. ಅಬ್ದುಲ್ಲಾ ಬಿನ್ ಬುಸ್ರಾರಿಂದ(ರ) ಉಲ್ಲೇಖಿತ. ಓರ್ವ ವ್ಯಕ್ತಿ ಪ್ರವಾದಿಯವರಲ್ಲಿ(ಸ) ನಿವೇದಿಸಿದ

يَا رَسُوْلَ اللّٰهِ اِنَّ شَرَائِعَ الْاِسْلَامَ قَدْ كَثُرَتْ عَلَيَّ فَاَخْبِرْنِیْ
بِشَیْءٍ اَتَشَبَّثُ بِهٖ قَالَ لَا یَزَالُ لِسَانُکَ رَطْبًا مِّنْ ذِکْرِ اللّٰهِ۔

"ಓ ಅಲ್ಲಾಹನ ಸಂದೇಶವಾಹಕರೇ! ಇಸ್ಲಾಮಿನಲ್ಲಿ ಆಜ್ಞೆಗಳು ಬಹಳ ಹೆಚ್ಚಿರುವಂತೆ ಭಾಸವಾಗುತ್ತಿದೆ. ಯಾವುದಾದರೊಂದನ್ನು ಭದ್ರವಾಗಿ ಅಪ್ಪಿಕೊಳ್ಳುವಂತೆ ತೋರಿಸಿರಿ. ಪ್ರವಾದಿ(ಸ) ಹೇಳಿದರು, "ಪ್ರತಿ ಕ್ಷಣ ನಿನ್ನ ನಾಲಗೆ ದೇವಸ್ತುತಿಯಲ್ಲಿ ತಲ್ಲೀನವಾಗಿರಲಿ"

## ದಿಕ್ರ್‌ನ ಶಿಷ್ಟಾಚಾರಗಳು

ಆತ್ಮೀಯ ಸಹೋದರರೇ, ದಿಕ್ರ್‌ನ ಉದ್ದೇಶ ಕೇವಲ ನಾಲಗೆಯ ದಿಕ್ರ್ ಅಲ್ಲ. ಬದಲಾಗಿ ತೌಬ(ಪಶ್ಚಾತ್ತಾಪ) ಕೂಡ ದಿಕ್ರ್ ಆಗಿದೆ ಎಂಬುದು ಸ್ಮರಣೀಯ. ಅಲ್ಲಾಹನ ದೃಷ್ಟಾಂತಗಳ ಬಗ್ಗೆ ಚಿಂತನ-ಮಂಥನವೂ ದಿಕ್ರ್‌ನ ಅತ್ಯುನ್ನತ ರೂಪಗಳಲ್ಲಿ ಒಂದಾಗಿದೆ. ವಿದ್ಯಾರ್ಜನೆಯೂ ದೇವಸ್ತುತಿಯಾಗಿದೆ. ಜೀವನೋಪಾಯ ಮಾರ್ಗದ ಪರಿಶ್ರಮದಲ್ಲಿ ಸುಸಂಕಲ್ಪವೂ ಸೇರಿದರೆ ಅದೂ ದಿಕ್ರ್ ಆಗಿದೆ. ಸಂಕ್ಷಿಪ್ತವಾಗಿ, ದೇವಸಂಪ್ರೀತಿಯ ಉದ್ದೇಶ ಮತ್ತು ಅಲ್ಲಾಹನಿಂದ ಯಾವುದೂ ಮರೆಯಾಗಿರದ ಹಾಗೂ ಅಲ್ಲಾಹನು ಪ್ರತಿಯೊಂದು ಸನ್ನಿವೇಶದಲ್ಲೂ ನಮ್ಮ ಸ್ಥಿತಿಗತಿಗಳ ಮತ್ತು ಆಲೋಚನೆಗಳ ಬಗ್ಗೆ ಪೂರ್ವಜ್ಞಾನವಿರುವವನೆಂಬ ದೃಢವಿಶ್ವಾಸದೊಂದಿಗೆ ಮಾಡುವ ಎಲ್ಲ ಕೆಲಸ ಕಾರ್ಯಗಳು ಸಹ ದೇವಸ್ಮರಣೆಯಲ್ಲಿ ಸೇರಿದೆ. ಈ ಎಲ್ಲ ಕಾರಣದಿಂದಾಗಿ ಪ್ರತಿಕ್ಷಣದಲ್ಲೂ ಅನುಕೂಲ ಪ್ರತಿಕೂಲ ಸ್ಥಿತಿಯಲ್ಲೂ ಸಜ್ಜನರು ದೇವಸ್ಮರಣೆಯಲ್ಲಿ ತಲ್ಲೀನರಾಗಿರುತ್ತಾರೆ.

ಶಿಷ್ಟಾಚಾರಕ್ಕೆ ವಿಶೇಷ ಗಮನಕೊಟ್ಟರೆ ಹೃದಯದಲ್ಲಿ ದಿಕ್ರ್‌ನ ಪ್ರಭಾವಗಳು ಅದೇ ರೀತಿಯಲ್ಲಿ ಪ್ರಕಟಗೊಳ್ಳುತ್ತವೆ. ಅನ್ಯಥಾ ಸ್ವರಚಿತ್ತ ಪದಗಳಿಂದ ತನ್ನೊಳಗೆ ಯಾವುದೇ ಪರಿಣಾಮ ಬೀರದು. ವಿದ್ವಾಂಸರು ದಿಕ್ರ್‌ನ ಬಗ್ಗೆ ಅನೇಕ ಶಿಷ್ಟಾಚಾರಗಳನ್ನು ವಿವರಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳು ಈ ರೀತಿಯಲ್ಲಿವೆ.

**1. ಭಯಭಕ್ತಿ:-**

ಸಭ್ಯತೆ, ಗೌರವ ಮತ್ತು ವಿನಮ್ರತೆಯನ್ನು ಜ್ಞಾಪಕದಲ್ಲಿಡಬೇಕು. ನಾಲಗೆಯಿಂದ ಪದಗಳನ್ನು ಉಚ್ಚರಿಸುವಾಗ ಅದರ ಅರ್ಥವನ್ನು ಗ್ರಹಿಸಿಕೊಳ್ಳಬೇಕು. ಅದರ ಗುರಿ ಮತ್ತು ಧ್ಯೇಯೋದ್ದೇಶಗಳ ಬಗ್ಗೆ ಆಲೋಚಿಸಬೇಕು.

**2. ಮೆಲುದನಿ:-**

ಪರಿಪೂರ್ಣ ಗಮನ, ಏಕಾಗ್ರತೆ ಮತ್ತು ಸಹನೆ ಹಾಗೂ ಸ್ಥೈರ್ಯದೊಂದಿಗೆ ದಿಕ್ರ್ ಮಾಡುವುದು ಅದರ ಶಿಷ್ಟಾಚಾರದಲ್ಲಿ ಸೇರಿದೆ. ಅದರೊಂದಿಗೆ ಇತರರ ಆರಾಧನೆಯಲ್ಲಿ ಯಾವುದೇ ರೀತಿಯ ಅಡಚಣೆಯುಂಟಾಗದಂತೆ ಎಚ್ಚರವಹಿಸಬೇಕು. ಪವಿತ್ರ ಕುರ್‌ಆನ್ ಅದರ ಬಗ್ಗೆ ಸೂಚಿಸುತ್ತಾ ಈ ರೀತಿ ಹೇಳಿದೆ:

وَاذْكُرْ رَّبَّكَ فِيْ نَفْسِكَ تَضَرُّعًا وَّ خِيفَةً وَّ دُوْنَ الْجَهْرِ

مِنَ الْقَوْلِ بِالْغُدُوِّ وَالْاٰصَالِ وَلَا تَكُنْ مِّنَ الْغٰفِلِيْنَ۝

"ಓ ಪೈಗಂಬರರೇ, ನಿಮ್ಮ ಪ್ರಭುವನ್ನು ಸಂಜೆ ಮುಂಜಾನೆಗಳಲ್ಲಿ ಮನಸ್ಸಿನೊಳಗೂ ಭಯಭರಿತರಾಗಿಯೂ ಮೆಲುದನಿಯೊಂದಿಗೂ ಸ್ಮರಿಸುತ್ತಲಿರಿ; ಅಸಡ್ಡೆಯಲ್ಲಿ ಬಿದ್ದಿರುವವರಲ್ಲಾಗಬೇಡಿರಿ." (ಪವಿತ್ರ ಕುರ್‌ಆನ್, 7:205)

**3. ತಂಡದ ಏಕರೂಪತೆ:-**

ತಂಡ ರೂಪದ ದಿಕ್ರ್‌ನ ಸಂದರ್ಭದಲ್ಲಿ ತಂಡದ ಶಿಷ್ಟಾಚಾರ, ಗೌರವ ಅತ್ಯಗತ್ಯವಾಗಿದೆ. ತಂಡದಿಂದ ಹಿಂದೆ ಉಳಿಯುವುದಾಗಲಿ ಮುಂದೆ ಹೋಗುವುದಾಗಲಿ ಸಲ್ಲದು. ತಡವಾಗಿ ಬಂದು ತಂಡವನ್ನು ಮಧ್ಯದಲ್ಲಿ ಸೇರುವುದಾದರೆ ಆರಂಭಿಸದಿರಿ. ಅನ್ಯಥಾ ಅರ್ಥ ವ್ಯತ್ಯಾಸ ಉಂಟಾಗಬಹುದು. ಪಠಣದಲ್ಲಿ ಅರ್ಥವ್ಯತ್ಯಾಸ ಉಂಟಾಗುವುದು. ಇದು ಕಟು ನಿಷಿದ್ಧವಾಗಿದೆ. ಆದರೆ ಯಾವುದೇ ದುಆ ಅಥವಾ ತಸ್ಬೀಹ್ ಪ್ರಾರಂಭದೊಂದಿಗೆ ಅವರೊಂದಿಗೆ ಜೊತೆಗೂಡಿದರೆ ಆರಂಭದಲ್ಲಿ ಬಿಟ್ಟು ಹೋದುದನ್ನು ಬಳಿಕ ಪೂರ್ಣಗೊಳಿಸಿರಿ. ಸಾಮೂಹಿಕವಾಗಿ ಪಠಿಸುವಾಗ ಇತರರಿಂದ ಹಿಂದುಳಿದರೆ ಸ್ತುತಿ-ಸ್ತೋತ್ರಗಳನ್ನು ಪೂರ್ಣಗೊಳಿಸುತ್ತಾ ಅವರೊಂದಿಗೆ ಸೇರಬೇಕು.

**4. ನೈರ್ಮಲ್ಯ:-**

ಬಟ್ಟೆ ಮತ್ತು ಸ್ಥಳ ಶುದ್ಧವಾಗಿರುವುದು ದಿಕ್ರ್‌ನ ಶಿಷ್ಟಾಚಾರವಾಗಿದೆ. ಪಾವನ ಸ್ಥಳಗಳು ಮತ್ತು ಸರಿಯಾದ ಸಮಯ ಪರಿಗಣಿಸಬೇಕು. ಅದರಿಂದ ದಾಸನ ಧೈರ್ಯ ಹೆಚ್ಚುತ್ತದೆ. ಮನದಲ್ಲಿ ನಿರ್ಮಲತೆ ಮತ್ತು ನಿಷ್ಕಳಂಕತೆ, ಸಂಕಲ್ಪದಲ್ಲಿ ನಿಸ್ಪೃಹತೆಯುಂಟಾಗುತ್ತದೆ.

**5. ವಿನಮ್ರತೆ ಮತ್ತು ಭಯಭಕ್ತಿ:-**

ವಿನಮ್ರ ಶಿಷ್ಟಾಚಾರ ಮತ್ತು ದೀನತೆಯ ಬಗ್ಗೆ ಗಮನವಿಡಬೇಕು. ಗುಲ್ಲುಗದ್ದಲದಿಂದ ದಿಕ್ರ್‌ನ ಪ್ರಭಾವ ಕಡಿಮೆಯಾಗುತ್ತದೆ.

ಈ ಶಿಷ್ಟಾಚಾರಗಳನ್ನು ಗಮನದಲ್ಲಿರಿಸಿ ದಿಕ್ರ್ ಮತ್ತು ಪವಿತ್ರ ಕುರ್‌ಆನಿನ ಪಠಣದಲ್ಲಿ ತೊಡಗಿಸಿಕೊಂಡವರು ಅಲ್ಲಾಹನಿಚ್ಛಿಸಿದರೆ ಹೃದಯದಲ್ಲಿ ದಿಕ್ರ್‌ನ ಪ್ರಭಾವ ಮತ್ತು ಅದರ ರುಚಿಯನ್ನನುಭವಿಸುವರು. ಅಲ್ಲಾಹನು ಅವರಿಗೆ ಆತ್ಮದ ಪ್ರಕಾಶ, ಹೃದಯ ವೈಶಾಲ್ಯ ಮತ್ತು ಮನಃಶಾಂತಿಯ ಸೌಭಾಗ್ಯ ಕರುಣಿಸಬಹುದು.

## ಸಾಮೂಹಿಕ ದಿಕ್ರ್

ಸಾಮೂಹಿಕವಾಗಿ ದಿಕ್ರ್ ಮಾಡುವುದು ಉತ್ತಮವೆಂದು ಹದೀಸ್‌ಗಳಿಂದ ವ್ಯಕ್ತವಾಗುತ್ತದೆ. ಸಹೀಹ್ ಮುಸ್ಲಿಮ್‌ನಲ್ಲಿರುವ ವರದಿ ಈ ರೀತಿಯಲ್ಲಿದೆ:

لاَ يَقْعُدُ قَوْمٌ يَذْكُرُوْنَ اللهَ عَزَّوَجَلَّ اِلَّا حَفَّتْهُمُ الْمَلاَئِكَةُ وَ غَشِيَتْهُمُ الرَّحْمَةُ، وَ نَزَلَتْ عَلَيْهِمُ السَّكِيْنَةُ وَ ذَكَرَهُمُ اللهُ فِيْمَنْ عِنْدَهُ۔

"ಕೆಲವು ಮಂದಿ ಒಟ್ಟಾಗಿ ಕುಳಿತು ದೇವಸ್ಮರಣೆಯಲ್ಲಿ ಮಗ್ನರಾಗಿದ್ದರೆ ದೇವಚರರು ಅವರನ್ನು ಸುತ್ತುವರಿಯುತ್ತಾರೆ. ಕರುಣೆ ಅವರನ್ನಾವರಿಸಿಕೊಳ್ಳುವುದು. ಅವರ ಮೇಲೆ ಪ್ರಶಾಂತಿ ಇಳಿಯುತ್ತದೆ ಮತ್ತು ಅಲ್ಲಾಹನು ತನ್ನ ಬಳಿಯಲ್ಲಿರುವ ಸೃಷ್ಟಿಗಳೊಂದಿಗೆ ಅವರನ್ನು ಸ್ಮರಿಸುತ್ತಾನೆ."

ಹದೀಸ್‌ಗಳಲ್ಲಿ ಅನೇಕಾನೇಕ ದಿಕ್ರ್‌ಗಳನ್ನು ಕಾಣಬಹುದು. ಮಸೀದಿಯಲ್ಲಿ ಸಹಾಬಿಗಳು(ರ) ಸಾಮೂಹಿಕವಾಗಿ ದಿಕ್ರ್ ಮಾಡುವುದನ್ನು ಪ್ರವಾದಿವರ್ಯರು(ಸ) ನೋಡಿ ಅವರಿಗೆ ಸುವಾರ್ತೆ ಕೊಟ್ಟರು. ಅವರನ್ನು ಪ್ರಶ್ನಿಸಲಿಲ್ಲ. ಹ. ಅಬೂಸಈದ್ ಖುದ್ರಿಯವರಿಂದ(ರ) ವರದಿಯಾದ ಹದೀಸ್‌ನಲ್ಲಿ ಒಮ್ಮೆ ಹ. ಮುಆವಿಯಾ(ರ) ಮಸೀದಿಗೆ ಆಗಮಿಸಿದರು. ಆಗ ಕೆಲವರು ಒಂದು ತಂಡದ ರೂಪದಲ್ಲಿ ಕುಳಿತಿರುವುದನ್ನು ನೋಡಿ ಕೇಳಿದರು: ನಿಮ್ಮನ್ನು ಯಾವುದು ಇಲ್ಲಿ ಕುಳಿತುಕೊಳ್ಳುವಂತೆ ಮಾಡಿತು? ಅವರು ಉತ್ತರಿಸಿದರು: ನಾವಿಲ್ಲಿ ಕೂತು ದೇವಸ್ಮರಣೆಯಲ್ಲಿ ತಲ್ಲೀನರಾಗಿದ್ದೇವೆ. ಹ. ಮುಆವಿಯಾ(ರ) ಹೇಳಿದರು: ಅಲ್ಲಾಹನಾಣೆ! ನೀವು ಕೇವಲ ಇದಕ್ಕಾಗಿ ಕೂತಿರುವಿರಾ? ಅವರು ಉತ್ತರಿಸಿದರು: ದೇವನಾಣೆ! ನಾವಿಲ್ಲಿ ಕೇವಲ ಅದಕ್ಕಾಗಿಯೇ ಕೂತಿದ್ದೇವೆ. ಹ.ಮುಆವಿಯಾ(ರ) ಹೇಳಿದರು: ನಿಮ್ಮ ಮೇಲೆ ಯಾವುದೇ ಸಂಶಯ ಅಥವಾ ಆರೋಪದ ಕಾರಣ ನಿಮ್ಮಿಂದ ಪ್ರಮಾಣ ಪಡೆದುದಲ್ಲ. ನಿಮ್ಮಲ್ಲಿ ನನ್ನಂತಹ ಸ್ಥಾನಮಾನವಿರುವವರ ಪೈಕಿ ನನಗಿಂತ ಕಡಿಮೆ ಹದೀಸ್‌ಗಳನ್ನು ವರದಿ ಮಾಡಿರುವರೆಂದೂ ಅಲ್ಲ. (ಅರ್ಥಾತ್ ಹದೀಸ್ ವರದಿ ಮಾಡುವುದರಲ್ಲಿ ನಾನು ತುಂಬಾ ಜಾಗರೂಕತೆ ಪಾಲಿಸುತ್ತೇನೆ). ಘಟನೆ ಈ ರೀತಿಯಲ್ಲಿದೆ: ಒಮ್ಮೆ ಪ್ರವಾದಿ(ಸ) ಮಸೀದಿಗೆ ಆಗಮಿಸಿದರು. ಆಗ ಅವರು ಸಹಾಬಿಗಳನ್ನು(ರ) ಒಂದು ತಂಡದ ರೂಪದಲ್ಲಿ ಕುಳಿತಿದ್ದುದ್ದನ್ನು ಕಂಡರು. ಅವರಲ್ಲಿ ಪ್ರವಾದಿ(ಸ) ನಿವೇದಿಸಿದರು "ನಿಮ್ಮನ್ನು ಯಾವುದು ಇಲ್ಲಿ ಕುಳಿತುಕೊಳ್ಳುವಂತೆ ಮಾಡಿತು. ಸಹಾಬಿಗಳು(ರ) ಉತ್ತರಿಸಿದರು. "ನಾವಿಲ್ಲಿ ಕೂತು ಅಲ್ಲಾಹನ ಸ್ಮರಣೆ ಮಾಡುತ್ತಿದ್ದೇವೆ. ಅವನು ಇಸ್ಲಾಮಿನ ಮೂಲಕ ನಮ್ಮ ಮಾರ್ಗದರ್ಶನ ಮಾಡಿ ನಮ್ಮ ಮೇಲೆ ಉಪಕಾರ ಮಾಡಿದನು. ಅದಕ್ಕಾಗಿ ಆತನ ಸ್ತುತಿ ಸ್ತೋತ್ರಗಳನ್ನು ಹೇಳುತ್ತಿದ್ದೇವೆ. ಪ್ರವಾದಿ(ಸ) ಹೇಳಿದರು: ನಾನು ನಿಮ್ಮ ಮೇಲೆ ಸಂದೇಹ ಅಥವಾ ಆರೋಪದ ಕಾರಣದಿಂದ

ನಿಮ್ಮಿಂದ ಪ್ರಮಾಣ ಬಯಸಿದ್ದಲ್ಲ. ಬದಲಾಗಿ ಜಿಬ್ರೀಲ್ ಅಮೀನ್ ಬಂದು ಅಲ್ಲಾಹನು ದೇವಚರರ ಮುಂದೆ ಹೆಮ್ಮೆ ಪಡುತ್ತಿದ್ದಾನೆಂದು ನನಗೆ ತಿಳಿಸಿದರು. (ಸಹೀಹ್ ಮುಸ್ಲಿಮ್, ತಿರ್ಮಿದಿ, ನಸಾಈ)

ಸಾಮೂಹಿಕ ಆರಾಧನೆಯಿಂದ ಅನೇಕ ಪ್ರಯೋಜನಗಳನ್ನು ಪಡೆಯಬಹುದಾದ್ದರಿಂದ ಅದನ್ನು ಉತ್ತಮವೆಂದು ಸಾರಲಾಗಿದೆ. ಉದಾಹರಣೆಗೆ, ಪರಸ್ಪರ ಸಂಬಂಧ, ಪ್ರಬಲ ಸಂಪರ್ಕ, ಹೃದಯ ಸಂಕಲನ, ಫಲಕಾರಿಯಾದ ಸಮಯದ ಸದ್ಬಳಕೆ, ಜ್ಞಾನವನ್ನು ಸ್ವತಃಗಳಿಸಲು ಅಶಕ್ತರಾದ ವ್ಯಕ್ತಿಗಳಿಗೆ ಅದರ ವ್ಯವಸ್ಥೆ, ಶರೀಯತ್ ನಿಷೇಧಿಸಿರುವ ಕೃತ್ಯಗಳಿಂದ ದೂರ ಉಳಿದು ದೇವಾದೇಶಗಳ ಪಾಲನೆ ಮಾಡುವುದು. ಆದರೆ ಇಂತಹ ಸನ್ನಿವೇಶದಲ್ಲಿ ಶರೀಯತ್ ಪ್ರಕಾರ ನಿಷೇಧಿತ ವಿಷಯಗಳು ಸಂಭವಿಸಬಹುದಾದ್ದರಿಂದ ಸಾಮೂಹಿಕ ದಿಕ್ರ್ ಅನುವದನೀಯವಲ್ಲ. ಉದಾಹರಣೆಗೆ, ಇತರ ನಮಾಝಿಗಳ ನಮಾಝ್‌ನಲ್ಲಿ ಭಂಗ ಉಂಟಾಗುವುದು. ಅದರಲ್ಲಿ ವಿನೋದ-ತಮಾಷೆ, ಹಾಗೆಯೇ ದಿಕ್ರ್‌ನ ಮೂಲದಲ್ಲಿ ಅರ್ಥ ವ್ಯತ್ಯಾಸ ಉಂಟಾಗುವುದು. ಇಂತಹ ಕೃತ್ಯಗಳು ಸಂಭವಿಸುವುದನ್ನು ಶರೀಯತ್(ಧರ್ಮಶಾಸ್ತ್ರ) ತಡೆದಿದೆ. ಇಂತಹ ಕೇಡುಂಟಾಗುವ ಸ್ಥಿತಿಯಲ್ಲಿ ಸಾಮೂಹಿಕ ದಿಕ್ರ್ ಮಾಡಬಾರದು. ಅನ್ಯಥಾ ಸಾಮೂಹಿಕ ದಿಕ್ರ್ ಮಾಡುವುದು ತಪ್ಪಲ್ಲ. ಈ ಸಾಮೂಹಿಕ ದಿಕ್ರ್‌ಗಳ ಪದ ಮತ್ತು ಸ್ತುತಿ-ಸ್ತೋತ್ರಗಳು ವಿಶೇಷವಾಗಿ ಪ್ರವಾದಿವರ್ಯರು(ಸ) ಹೇಳುತ್ತಿದ್ದಂತಹದ್ದಾಗಿರಬೇಕು.

ಆಂದೋಲನದ ಬಾಂಧವರು ಸಂಜೆ ಮುಂಜಾನೆಗಳಲ್ಲಿ ಮಸೀದಿ ಮತ್ತು ಸಭೆ ಗಳಲ್ಲಿ ಒಟ್ಟು ಸೇರಿ ಅನಪೇಕ್ಷಿತ ವಿಷಯಗಳಿಂದ ದೂರ ಉಳಿದು, ದಿಕ್ರ್‌ಗಳ ವ್ಯವಸ್ಥೆ ಮಾಡುವುದು ಬಹಳ ಒಳ್ಳೆಯದಾಗಬಹುದು. ಆದರೆ ಸಾಮೂಹಿಕ ದಿಕ್ರ್‌ನಲ್ಲಿ ಯಾರಿಗಾದರೂ ಭಾಗಿಯಾಗಲು ಅಸಾಧ್ಯವಾದಲ್ಲಿ ವೈಯಕ್ತಿಕವಾಗಿ ಅದನ್ನು ಮಾಡಬೇಕು ಮತ್ತು ಅದರಲ್ಲಿ ಅಲ್ಪವೂ ಆಲಸ್ಯಪಡಬಾರದು.

ಈ ಸ್ತುತಿ-ಸ್ತೋತ್ರಗಳು ಫಜ್ರ್‌ನಿಂದ ಅಸರ್ ತನಕ ಮತ್ತು ಅಸರ್‌ನಿಂದ ಇಶಾ ತನಕ ಯಾವುದೇ ಸಮಯ ಸಾಮೂಹಿಕವಾಗಿ ಅಥವಾ ವೈಯಕ್ತಿಕವಾಗಿ ಪಠಿಸಬಹುದು. ಯಾರಿಗೆ ಈ ಎಲ್ಲ ಸ್ತುತಿ-ಸ್ತೋತ್ರಗಳನ್ನು ಪಠಿಸುವುದು ಅಸಾಧ್ಯವೋ, ಅವರು ಸಹ ಕೆಲವು ಆಯ್ದ ಭಾಗಗಳನ್ನಾದರೂ ಅಗತ್ಯವಾಗಿ ಪಠಿಸುತ್ತಿರಬೇಕು. ಏಕೆಂದರೆ ಅವರಿಗೆ ಆಲಸ್ಯ ಮತ್ತು ಕಾಲಹರಣದ ಪರಿಪಾಠವಾಗಬಾರದು. ಪವಿತ್ರ ಕುರ್‌ಆನ್‌ನಲ್ಲಿರುವ ದಿಕ್ರ್‌ಗಳನ್ನು ದಿನ ರಾತ್ರಿಯ ಯಾವುದಾದರೂ ಸೂಕ್ತ ಸಮಯದಲ್ಲಿ ಪಠಿಸಬೇಕಾಗಿದೆ. ದಿನಂಪ್ರತಿ ತಸ್ಬೀಹ್ ಮತ್ತು ಕುರ್‌ಆನಿನಲ್ಲಿರುವ ದಿಕ್ರ್‌ಗಳಲ್ಲದೆ ಪ್ರವಾದಿ(ಸ) ಕಲಿಸಿರುವ ಪ್ರಾರ್ಥನೆ ಗಳನ್ನು ಹಾಗೂ ದಿಕ್ರ್‌ಗಳನ್ನು ಸಹ ಸೂಕ್ತ ಕಂಡಂತೆ ಪಠಿಸುತ್ತಿರಬೇಕು.

5 ರಮದಾನುಲ್ ಕರೀಮ್ 1355 ಹಸನುಲ್ ಬನ್ನಾ

# ದೈನಂದಿನ ದಿಕ್ರ್‌ಗಳು

أَعُوذُ بِاللّٰهِ السَّمِيعِ الْعَلِيمِ مِنَ الشَّيْطَانِ الرَّجِيمِ۝

"ಅಊದುಬಿಲ್ಲಾಹಿಸ್ಸಮೀಇಲ್ ಅಲೀಮಿ ಮಿನಶ್ಶೈತಾನಿರ್ರಜೀಮ್"

1. ಶಪಿತ ಶೈತಾನನ ಉಪಟಳದಿಂದ ಸಕಲವನ್ನು ಆಲಿಸುವವನೂ ಸರ್ವಜ್ಞನೂ ಆಗಿರುವ ಅಲ್ಲಾಹನ ಅಭಯ ಯಾಚಿಸುತ್ತೇನೆ.[1]

بِسْمِ اللّٰهِ الرَّحْمٰنِ الرَّحِيمِ۝

"ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್"

2. ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ ಪ್ರಾರಂಭಿಸುತ್ತೇನೆ.[2]

---

1. ಅಲ್ಲಾಹನು ಹೇಳುತ್ತಾನೆ- "ನೀವು ಕುರ್‌ಆನನ್ನು ಪಠಿಸಲಾರಂಭಿಸುವಾಗ ಶಪಿತ ಶೈತಾನನಿಂದ ಅಲ್ಲಾಹನ ಅಭಯ ಯಾಚಿಸಿಕೊಳ್ಳಿರಿ." (ಅನ್ನಹ್ಲ್, 98)

ಹ. ಅನಸ್‌ರಿಂದ(ರ) ವರದಿಯಾಗಿದೆ- ಪ್ರವಾದಿ(ಸ) ಹೇಳಿದರು: ಯಾರು ಮುಂಜಾನೆ ಏಳುವಾಗ 'ಅವೂದು ಬಿಲ್ಲಾಹಿಸ್ಸಮೀಇಲ್ ಅಲೀಮಿ ಮಿನಶ್ಶೈತಾನಿರ್ರಜೀಮ್' ಪಠಿಸಿದನೋ ಆತ ಸಂಜೆಯ ತನಕ ಶೈತಾನನಿಂದ ಸುರಕ್ಷಿತನಾದನು.

2. ಪ್ರವಾದಿ(ಸ) ಹೇಳುತ್ತಾರೆ "ಯಾರು 'ಬಿಸ್ಮಿಲ್ಲಾಹ್'ದಿಂದ ತನ್ನ ಕೆಲಸ ಕಾರ್ಯವನ್ನು ಆರಂಭಿಸು ವುದಿಲ್ಲವೋ ಆತ ಸಮೃದ್ಧಿಯಿಂದ ವಂಚಿತನಾಗುವನು.

ಹ.ಉಬೈ ಬಿನ್ ಕಅಬ್‌ರಿಂದ(ರ) ವರದಿಯಾಗಿದೆ. ಪ್ರವಾದಿ(ಸ) ಹೇಳಿದರು: 'ನನ್ನ ಪ್ರಾಣ ಯಾರ ಕೈಯಲ್ಲಿದೆಯೋ ಆತನಾಣೆ! ಈ (ಸೂರ ಫಾತಿಹಾ) ಅಧ್ಯಾಯದಂತಹದ್ದು ತೌರಾತ್ ನಲ್ಲಾಗಲಿ, ಇಂಜೀಲ್‌ನಲ್ಲಾಗಲಿ, ಝುಬೂರ್‌ನಲ್ಲಾಗಲಿ, ಫುರ್ಕಾನ್‌ನಲ್ಲಾಗಲೀ ಅವತೀರ್ಣ ವಾಗಿಲ್ಲ. ಅದು ಪುನಃ ಪುನಃ ಪುನರಾವರ್ತಿಸಲ್ಪಡುವ ಏಳು ಸೂಕ್ತಗಳು ಮತ್ತು ಪವಿತ್ರ ಕುರ್‌ಆನ್ ನನಗೆ ನೀಡಲ್ಪಟ್ಟಿದೆ.

اَلْحَمْدُ لِلّٰهِ رَبِّ الْعٰلَمِيْنَo اَلرَّحْمٰنِ الرَّحِيْمِo مٰلِكِ يَوْمِ الدِّيْنِo اِيَّاكَ نَعْبُدُ وَ اِيَّاكَ نَسْتَعِيْنُo اِهْدِنَا الصِّرَاطَ الْمُسْتَقِيْمَo صِرَاطَ الَّذِيْنَ اَنْعَمْتَ عَلَيْهِمْo غَيْرِ الْمَغْضُوْبِ عَلَيْهِمْ وَلاَ الضَّآلِّيْنَo

3. ಅಲ್ಲಾಹನಿಗೆ ಸರ್ವಸ್ತುತಿ, ಅವನು ಸಕಲ ವಿಶ್ವದ ಪ್ರಭು. ಪರಮ ದಯಾಳು, ಕರುಣಾನಿಧಿ. ನಿರ್ಣಾಯಕ ದಿನದ ಅಧಿಪತಿ(ಆದ ಪ್ರಭುವೇ) ನಾವು ನಿನಗೆ ಮಾತ್ರ ಇಬಾದತ್(ಆರಾಧನೆ) ಮಾಡುತ್ತೇವೆ ಮತ್ತು ನಿನ್ನೊರ್ವನಿಂದ ಮಾತ್ರ ಸಹಾಯ ಬೇಡುತ್ತೇವೆ. ನಮಗೆ ಸನ್ಮಾರ್ಗವನ್ನು ತೋರಿಸು. ನೀನು ಅನುಗ್ರಹಿಸಿದವರ ಮಾರ್ಗ, ನಿನ್ನ ಕ್ರೋಧಕ್ಕೆ ಪಾತ್ರರಾದವರ ಮಾರ್ಗವಲ್ಲ. (ನೀನು ತೋರಿದ) ದಾರಿಯನ್ನು ತಪ್ಪಿ ನಡೆದವರ ಮಾರ್ಗವೂ ಅಲ್ಲ.

بِسْمِ اللّٰهِ الرَّحْمٰنِ الرَّحِيْمِ– الٓمّٓo ذٰلِكَ الْكِتٰبُ لاَ رَيْبَ فِيْهِ هُدًى لِّلْمُتَّقِيْنَo الَّذِيْنَ يُؤْمِنُوْنَ بِالْغَيْبِ وَ يُقِيْمُوْنَ الصَّلٰوةَ وَ مِمَّا رَزَقْنٰهُمْ يُنْفِقُوْنَo وَالَّذِيْنَ يُؤْمِنُوْنَ بِمَآ اُنْزِلَ اِلَيْكَ وَمَآ اُنْزِلَ مِنْ قَبْلِكَ وَ بِالْاٰخِرَةِ هُمْ يُوْقِنُوْنَo اُولٰٓئِكَ عَلٰى هُدًى مِّنْ رَّبِّهِمْ وَ اُولٰٓئِكَ هُمُ الْمُفْلِحُوْنَo

4. ಅಲಿಫ್ ಲಾಮ್ ಮೀಮ್. ಇದು (ದೈವಿಕ) ಗ್ರಂಥ; ಸಂದೇಹಾತೀತವಿದು. ಭಯಭಕ್ತಿಯುಳ್ಳವರಿಗೆ ಇದು ಮಾರ್ಗದರ್ಶಿ. ಪರೋಕ್ಷದ ಮೇಲೆ ವಿಶ್ವಾಸವಿರಿಸುವವರಿಗೆ, ನಮಾಝನ್ನು ಸಂಸ್ಥಾಪಿಸುವವರಿಗೆ, ನಾವು ನೀಡಿರುವ ಸಂಪತ್ಸೌಕರ್ಯಗಳಿಂದ ವ್ಯಯಿಸುವವರಿಗೆ ನಿಮಗೆ ಅವತೀರ್ಣಗೊಳಿಸಿದ ಗ್ರಂಥದ (ಅರ್ಥಾತ್ ಕುರ್‌ಆನ್) ಮತ್ತು ನಿಮಗಿಂತ ಮೊದಲು ಅವತೀರ್ಣಗೊಳಿಸಿದ್ದ ಎಲ್ಲಾ ಗ್ರಂಥಗಳ ಮೇಲೆ ವಿಶ್ವಾಸವಿಡುವವರಿಗೆ ಮತ್ತು ಪರಲೋಕದ ಮೇಲೆ ದೃಢ ವಿಶ್ವಾಸವಿಡುವವರಿಗೆ (ಇದು ಮಾರ್ಗದರ್ಶಿ). ಅಂತಹವರು ತಮ್ಮ ಪ್ರಭುವಿನ ಸನ್ಮಾರ್ಗದಲ್ಲಿದ್ದಾರೆ ಮತ್ತು ಅವರೇ ಯಶಸ್ವಿಯಾಗುವವರು.

**(ಪವಿತ್ರ ಕುರ್‌ಆನ್, 2:1-5)**

بِسْمِ اللّٰهِ الرَّحْمٰنِ الرَّحِيْمِ – اَللّٰهُ لَآ اِلٰهَ اِلَّا هُوَ ۚ اَلْحَيُّ
الْقَيُّوْمُ لاَ تَاْخُذُهٗ سِنَةٌ وَّلاَ نَوْمٌ لَهٗ مَا فِى السَّمٰوٰتِ وَمَا فِى
الْاَرْضِ مَنْ ذَا الَّذِىْ يَشْفَعُ عِنْدَهٗٓ اِلَّا بِاِذْنِهٖ يَعْلَمُ مَا بَيْنَ
اَيْدِيْهِمْ وَمَا خَلْفَهُمْ وَلاَ يُحِيْطُوْنَ بِشَىْءٍ مِّنْ عِلْمِهٖٓ اِلَّا بِمَا
شَآءَ وَسِعَ كُرْسِيُّهُ السَّمٰوٰتِ وَالْاَرْضَ وَلاَ يَؤُدُهٗ حِفْظُهُمَا
وَ هُوَ الْعَلِيُّ الْعَظِيْمُo لَآ اِكْرَاهَ فِى الدِّيْنِ قَدْ تَّبَيَّنَ الرُّشْدُ مِنَ
الْغَيِّ فَمَنْ يَّكْفُرْ بِالطَّاغُوْتِ وَ يُؤْمِنْ بِاللّٰهِ فَقَدِ اسْتَمْسَكَ
بِالْعُرْوَةِ الْوُثْقٰى لاَ انْفِصَامَ لَهَا وَاللّٰهُ سَمِيْعٌ عَلِيْمٌo اَللّٰهُ وَلِيُّ
الَّذِيْنَ اٰمَنُوْا يُخْرِجُهُمْ مِّنَ الظُّلُمٰتِ اِلَى النُّوْرِ وَالَّذِيْنَ كَفَرُوْٓا
اَوْلِيٰٓئُهُمُ الطَّاغُوْتُ يُخْرِجُوْنَهُمْ مِّنَ النُّوْرِ اِلَى الظُّلُمٰتِ
اُولٰٓئِكَ اَصْحٰبُ النَّارِ هُمْ فِيْهَا خٰلِدُوْنَo

5. ಅಲ್ಲಾಹ್ ಚಿರಂತನು, ಸ್ವಯಂ ಜೀವಂತನು. ಅಖಿಲ ಪ್ರಪಂಚದ ನಿಯಂತ್ರಕನಾದ ಆತನ ಹೊರತು ಆರಾಧ್ಯನಾರೂ ಇಲ್ಲ. ಅವನಿಗೆ ತೂಕಡಿಗೆಯಾಗಲೀ ನಿದ್ರೆಯಾಗಲೀ ಬಾಧಿಸುವುದಿಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವುದೆಲ್ಲವೂ ಆತನದೇ. ಆತನ ಸನ್ನಿಧಿಯಲ್ಲಿ ಆತನ ಅಪ್ಪಣೆಯಿಲ್ಲದೆ ಶಿಫಾರಸು ಮಾಡತಕ್ಕವವನಾರಿದ್ದಾನೆ? ದಾಸರ ಮುಂದಿರುವುದನ್ನೂ ಆತನು ಬಲ್ಲನು. ಅವರಿಂದ ಮರೆಯಾಗಿರುವುದನ್ನೂ ಆತನು ಬಲ್ಲನು. ಆತನು ಸ್ವಯಂ ತಿಳಿಯಗೊಡಿಸುವ ಹೊರತು ಆತನ ಜ್ಞಾನ ಭಂಡಾರದಿಂದ ಯಾವ ವಿಷಯವನ್ನೂ ಅವರು ತಿಳಿಯಲಾರರು. ಅವನ ಅಧಿಕಾರವು ಆಕಾಶಗಳನ್ನೂ ಭೂಮಿಯನ್ನೂ ವ್ಯಾಪಿಸಿದೆ. ಅವುಗಳ ಸಂರಕ್ಷಣೆಯು ಆತನಿಗೆ ದಣಿಸುವಂತಹ ಕಾರ್ಯವಲ್ಲ. ಅವನು ಏಕೈಕ ಮಹೋನ್ನತನೂ ಸರ್ವಶ್ರೇಷ್ಠನೂ ಆಗಿರುತ್ತಾನೆ. ಧರ್ಮದ ವಿಷಯದಲ್ಲಿ ಯಾವುದೇ ಒತ್ತಾಯ ಬಲಾತ್ಕಾರಗಳಿಲ್ಲ. ಸನ್ಮಾರ್ಗವು ದುರ್ಮಾರ್ಗದಿಂದ ಬೇರ್ಪಡಿಸಲ್ಪಟ್ಟಿದೆ. ಇನ್ನು 'ತಾಗೂತ'(ಅತಿಕ್ರಮ)ನ್ನು ನಿರಾಕರಿಸಿ ಅಲ್ಲಾಹನಲ್ಲಿ ವಿಶ್ವಾಸವಿಟ್ಟಾತನು ಎಂದೆಂದಿಗೂ ಮುರಿಯದಂತಹ ಬಲವಾದ ಆಧಾರವನ್ನು ನೆಚ್ಚಿಕೊಂಡನು. (ಅವನು ಆಶ್ರಯ ಪಡೆದ) ಅಲ್ಲಾಹ್ ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ. ಅಲ್ಲಾಹ್ ಸತ್ಯವಿಶ್ವಾಸಿಗಳ ರಕ್ಷಕ ಮಿತ್ರನಾಗಿರುತ್ತಾನೆ ಮತ್ತು ಅವನು ಇವರನ್ನು ಅಂಧಕಾರದಿಂದ ಹೊರ ತೆಗೆದು ಪ್ರಕಾಶಕ್ಕೆ

ತರುತ್ತಾನೆ ಮತ್ತು ನಿರಾಕರಣೆಯ ಮಾರ್ಗವನ್ನನುಸರಿಸುವವರ ರಕ್ಷಕಮಿತ್ರರು ಅತಿಕ್ರಮಿ (ತಾಗೂತ್)ಗಳಾಗಿದ್ದಾರೆ. ಅವರು ಇವರನ್ನು ಪ್ರಕಾಶದಿಂದ ಅಂಧಕಾರಗಳ ಕಡೆಗೆ ಎಳೆದೊಯ್ಯುತ್ತಾರೆ. ಇವರು ನರಕಾಗ್ನಿಯವರಾಗಿದ್ದು ಸದಾ ಅಲ್ಲೇ ಇರುವರು.[3]

**(ಪವಿತ್ರ ಕುರ್‌ಆನ್, 2:255-257)**

بِسْمِ اللّٰهِ الرَّحْمٰنِ الرَّحِيْمِ – لِلّٰهِ مَا فِي السَّمٰوٰتِ وَمَا فِي الْاَرْضِ وَ اِنْ تُبْدُوْا مَا فِيْٓ اَنْفُسِكُمْ اَوْ تُخْفُوْهُ يُحَاسِبْكُمْ بِهِ اللّٰهُ فَيَغْفِرُ لِمَنْ يَّشَآءُ وَ يُعَذِّبُ مَنْ يَّشَآءُ وَاللّٰهُ عَلٰى كُلِّ شَيْءٍ قَدِيْرٌo اٰمَنَ الرَّسُوْلُ بِمَآ اُنْزِلَ اِلَيْهِ مِنْ رَّبِّهٖ وَالْمُؤْمِنُوْنَ كُلٌّ اٰمَنَ بِاللّٰهِ وَ مَلٰٓئِكَتِهٖ وَ كُتُبِهٖ وَ رُسُلِهٖ لاَ نُفَرِّقُ بَيْنَ اَحَدٍ مِّنْ رُّسُلِهٖ وَ قَالُوْا سَمِعْنَا وَ اَطَعْنَا غُفْرَانَكَ رَبَّنَا وَ اِلَيْكَ الْمَصِيْرُo لاَ يُكَلِّفُ اللّٰهُ نَفْسًا اِلَّا وُسْعَهَا لَهَا مَاكَسَبَتْ وَ عَلَيْهَا مَا اكْتَسَبَتْ رَبَّنَا لاَ تُؤَاخِذْنَآ اِنْ نَّسِيْنَآ اَوْ اَخْطَاْنَا رَبَّنَا وَلاَ تَحْمِلْ عَلَيْنَآ اِصْرًا كَمَا حَمَلْتَهٗ عَلَى الَّذِيْنَ مِنْ قَبْلِنَا رَبَّنَا وَلاَ تُحَمِّلْنَا مَالاَ طَاقَةَ لَنَا بِهٖ وَاعْفُ عَنَّا وَاغْفِرْلَنَا وَارْحَمْنَا اَنْتَ مَوْلٰنَا فَانْصُرْنَا عَلَى الْقَوْمِ الْكٰفِرِيْنَo

6. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹನದು. ನಿಮ್ಮ ಮನದಿಂಗಿತಗಳನ್ನು ನೀವು ಬಹಿರಂಗಗೊಳಿಸಿದರೂ ಬಚ್ಚಿಟ್ಟರೂ ಅಲ್ಲಾಹನು ನಿಮ್ಮಿಂದ ಅವುಗಳ ಲೆಕ್ಕಾಚಾರ ಪಡೆದೇ ತೀರುವನು. ಅನಂತರ ತನಗಿಷ್ಟ ಬಂದವರನ್ನು ಶಿಕ್ಷಿಸುವ ಅಧಿಕಾರ ಅವನಿಗಿದೆ. ಅಲ್ಲಾಹನು ಪ್ರತಿಯೊಂದು ವಿಷಯದಲ್ಲಿ ಅಧಿಕಾರವಿರುವವನಾಗಿರುತ್ತಾನೆ. ಸಂದೇಶವಾಹಕರು ತನ್ನ ಪ್ರಭುವಿನ ವತಿಯಿಂದ ಅವತೀರ್ಣಗೊಂಡುದರ ಮೇಲೆ

---

3. ಹ. ಅಬ್ದುಲ್ಲ ಮಸ್‌ವೂದ್‌ರಿಂದ(ರ) ಉಲ್ಲೇಖಿತ: ಯಾವ ವ್ಯಕ್ತಿ ಅಲ್ ಬಕರಃ ಅಧ್ಯಾಯದ ಹತ್ತು ಸೂಕ್ತಗಳನ್ನು ಮುಂಜಾನೆ ಪಠಿಸುವನೋ ಆತನ ಬಳಿ ಮುಸ್ಸಂಜೆಯ ತನಕ ಶೈತಾನನು ಸುಳಿಯಲಾರ. ಈ ಸೂಕ್ತಗಳನ್ನು ಮುಸ್ಸಂಜೆಯ ಸಮಯ ಪಠಿಸಿದರೆ ಪ್ರಭಾತದವರೆಗೆ ಶೈತಾನನು ಆತನ ಬಳಿ ಹೋಗಲಾರ. ಮತ್ತು ಆತನ ಕುಟುಂಬ ಸಂಪತ್ತು ಹಾಗೂ ಸಾಧನಗಳಲ್ಲಿ ಯಾವುದೇ ಅಪ್ರಿಯ ವಿಷಯವಿರಲಾರದು.

ವಿಶ್ವಾಸವಿರಿಸಿದ್ದಾರೆ ಮತ್ತು ಈ ಸಂದೇಶವಾಹಕರ ಮೇಲೆ ವಿಶ್ವಾಸವಿಡುವವರು ಸಹ ಈ ಬೋಧನೆಯನ್ನು ಹೃತ್ಪೂರ್ವಕ ಸ್ವೀಕರಿಸಿದ್ದಾರೆ. ಇವರೆಲ್ಲರೂ ಅಲ್ಲಾಹನಲ್ಲಿಯೂ ಅವನ ದೇವಚರರಲ್ಲಿಯೂ ಅವನ ದಿವ್ಯ ಗ್ರಂಥಗಳಲ್ಲಿಯೂ ಅವನ ಸಂದೇಶವಾಹಕರಲ್ಲಿಯೂ ವಿಶ್ವಾಸವಿರಿಸುತ್ತಾರೆ. 'ನಾವು ಅಲ್ಲಾಹನ ಸಂದೇಶವಾಹಕರ ನಡುವೆ ಯಾವತ್ತು ತಾರತಮ್ಯವನ್ನಿರಿಸುವುದಿಲ್ಲ. ನಾವು ಆಜ್ಞೆಯನ್ನು ಆಲಿಸಿದೆವು ಮತ್ತು ಅನುಸರಣೆಯನ್ನು ಸ್ವೀಕರಿಸಿದೆವು. ನಮ್ಮ ಪ್ರಭೂ, ನಾವು ನಿನ್ನಿಂದ ಪಾಪವಿಮೋಚನೆಯನ್ನು ಬಯಸುತ್ತೇವೆ ಮತ್ತು ನಮಗೆ ನಿನ್ನ ಕಡೆಗೇ ಮರಳಲಿಕ್ಕಿದೆ' ಎಂದು ಅವರನ್ನುತ್ತಾರೆ. ಅಲ್ಲಾಹನು ಯಾವ ಜೀವಿಯ ಮೇಲೂ ಅವನ ಶಕ್ತಿಗೆ ಮೀರಿದ ಹೊಣೆ ಹೊರಿಸುವುದಿಲ್ಲ. ಪ್ರತಿಯೊಬ್ಬನು ಗಳಿಸಿದ ಪುಣ್ಯದ ಫಲ ಅವನಿಗೆ ಸಿಗುವುದು ಮತ್ತು ಅವನು ಶೇಖರಿಸಿದ ಪಾಪದ ದಂಡವೂ ಅವನ ಮೇಲೆಯೇ ಇರುವುದು (ಓ ಸತ್ಯವಿಶ್ವಾಸಿಗಳೇ! ನೀವು ಹೀಗೆ ಯಾಚಿಸಿರಿ:) ಓ ನಮ್ಮ ಪ್ರಭೂ, ನಮ್ಮಿಂದ ಪ್ರಮಾದವಶಾತ್ ಅಪರಾಧಗಳಾಗಿಬಿಟ್ಟರೆ ಅವುಗಳಿಗಾಗಿ ನಮ್ಮನ್ನು ಹಿಡಿಯಬೇಡ. ಪ್ರಭೂ, ನಮ್ಮ ಪೂರ್ವಿಕರ ಮೇಲೆ ಹೊರಿಸಿದಂತಹ ಹೊರೆಯನ್ನು ನಮ್ಮ ಮೇಲೆ ಹೊರಿಸಬೇಡ. ಓ ನಮ್ಮ ಪ್ರಭೂ, ನಮ್ಮಿಂದ ಹೊರಲು ಸಾಧ್ಯವಾಗದ ಹೊರೆಯನ್ನು ನಮ್ಮ ಮೇಲೆ ಹೊರಿಸಬೇಡ. ನಮ್ಮ ಪಾಪಗಳನ್ನು ಪರಿಹರಿಸು, ನಮ್ಮನ್ನು ಕ್ಷಮಿಸು, ನಮ್ಮ ಮೇಲೆ ಕೃಪೆದೋರು. ನೀನೇ ನಮ್ಮ ಸ್ವಾಮಿಯು ಸತ್ಯನಿಷೇಧಿಗಳ ಎದುರು ನಮಗೆ ಸಹಾಯ ಮಾಡು.[4] (ಪವಿತ್ರ ಕುರ್‌ಆನ್, 2:284-286)

بِسْمِ اللّٰهِ الرَّحْمٰنِ الرَّحِيْمِ – الٓمّٓ ۝ اللّٰهُ لَآ اِلٰهَ اِلَّا هُوَ الْحَيُّ الْقَيُّوْمُ ۝

7. ಅಲಿಫ್ ಲಾಮ್ಮೀಮ್. ಅಲ್ಲಾಹ್ ಅವನ ಅಸ್ತಿತ್ವವು ಚಿರಂತನವಾಗಿದ್ದು, ವಿಶ್ವ ವ್ಯವಸ್ಥಾಪನೆ ಮಾಡುತ್ತಲಿದೆ. ವಸ್ತುತಃ ಅವನ ಹೊರತು ಅನ್ಯ ಆರಾಧ್ಯನಿಲ್ಲ.

(ಪವಿತ್ರ ಕುರ್‌ಆನ್, 3:1-3)

بِسْمِ اللّٰهِ الرَّحْمٰنِ الرَّحِيْمِ – وَعَنَتِ الْوُجُوْهُ لِلْحَيِّ الْقَيُّوْمِ وَقَدْ خَابَ مَنْ حَمَلَ ظُلْمًا ۝ وَمَنْ يَّعْمَلْ مِنَ الصّٰلِحٰتِ وَهُوَ مُؤْمِنٌ فَلَا يَخٰفُ ظُلْمًا وَّلَا هَضْمًا ۝

4. ಪ್ರವಾದಿ(ಸ) ಹೇಳಿದರು- ಯಾವಾತನು ಸೂರ ಅಲ್‌ಬಕರದ ಹತ್ತು ಸೂಕ್ತಗಳು- ಮೊದಲ ನಾಲ್ಕು ಸೂಕ್ತಗಳು, ಆಯತುಲ್ ಕುರ್ಸಿ ಮತ್ತು ಅದರ ಬಳಿಕದ ಎರಡು ಸೂಕ್ತಗಳ ಹಾಗೂ ಅಧ್ಯಾಯದ ಕೊನೆಯ ಸೂಕ್ತಗಳನ್ನು ಪಠಿಸಿದನೋ ಆತನ ಮನೆಗೆ ಪ್ರಭಾತದ ವರೆಗೆ ಶೈತಾನ್ ಪ್ರವೇಶಿಸಲಾರ. (ತಬ್ರಾನಿ)

8. ಜನರ ಶಿರಗಳು ಆ ಚಿರಂತನನ ಹಾಗೂ ಸ್ವಯಂ ಸ್ಥಿರನ ಮುಂದೆ ಬಾಗುವುವು. ಆಗ ಅಕ್ರಮದ ಪಾಪ ಭಾರ ಹೊತ್ತಿರುವವನು ವಿಫಲನಾಗುವನು. ಸತ್ಕರ್ಮಗಳನ್ನು ಮಾಡಿರುವುದರೊಂದಿಗೆ ಸತ್ಯವಿಶ್ವಾಸಿಯೂ ಆಗಿರುವಾತನಿಗೆ ಯಾವುದೇ ಅನ್ಯಾಯ ಮತ್ತು ಹಕ್ಕುಚ್ಯುತಿಯ ಭಯವಿರಲಾರದು. **(ಪವಿತ್ರ ಕುರ್‌ಆನ್, 20:111-112)**

بِسْمِ اللّٰهِ الرَّحْمٰنِ الرَّحِيْمِ – حَسْبِىَ اللّٰهُ لَآ اِلٰهَ اِلَّا هُوَ عَلَيْهِ تَوَكَّلْتُ وَ هُوَ رَبُّ الْعَرْشِ الْعَظِيْمِo

9. ನನಗೆ ಅಲ್ಲಾಹನೇ ಸಾಕು. ಅವನ ಹೊರತು ಅನ್ಯ ಆರಾಧ್ಯನಿಲ್ಲ. ನಾನು ಅವನ ಮೇಲೆಯೇ ಭರವಸೆಯನ್ನಿರಿಸಿದ್ದೇನೆ ಮತ್ತು ಅವನು ವಿಶ್ವ ಮಹಾಸಿಂಹಾಸನದ ಮಾಲಿಕನಾಗಿರುತ್ತಾನೆ.[5] **(ಪವಿತ್ರ ಕುರ್‌ಆನ್, 9:129)**

بِسْمِ اللّٰهِ الرَّحْمٰنِ الرَّحِيْمِ – قُلِ ادْعُوا اللّٰهَ اَوِ ادْعُوا الرَّحْمٰنَ اَيًّامَّا تَدْعُوْا فَلَهُ الْاَسْمَآءُ الْحُسْنٰى وَلَا تَجْهَرْ بِصَلَاتِكَ وَلَا تُخَافِتْ بِهَا وَابْتَغِ بَيْنَ ذٰلِكَ سَبِيْلًاo وَ قُلِ الْحَمْدُ لِلّٰهِ الَّذِىْ لَمْ يَتَّخِذْ وَلَدًا وَّلَمْ يَكُنْ لَّهُ شَرِيْكٌ فِى الْمُلْكِ وَلَمْ يَكُنْ لَّهُ وَلِىٌّ مِّنَ الذُّلِّ وَ كَبِّرْهُ تَكْبِيْرًاo

10. ಓ ಪೈಗಂಬರರೇ, ಇವರೊಡನೆ ಹೇಳಿರಿ! "ಅಲ್ಲಾಹ್ ಎಂದು ಕರೆಯಿರಿ ಅಥವಾ ಪರಮ ದಯಾಮಯ ಎಂದು ಕರೆಯಿರಿ" ಯಾವ ಹೆಸರಿಂದ ಕರೆದರೂ ಅವನಿಗೆ ಎಲ್ಲವೂ ಒಳ್ಳೆಯ ನಾಮಗಳೇ ಇವೆ ಮತ್ತು ನಿಮ್ಮ ನಮಾಝನ್ನು ಬಹಳ ಉಚ್ಚ ಸ್ವರದಲ್ಲಾಗಲಿ ತೀರಾ ಮೆಲುದನಿಯಲ್ಲಾಗಲಿ ನಿರ್ವಹಿಸಬೇಡಿರಿ. ಇವರೆಡರ ನಡುವೆ ಮಧ್ಯಮ ತರದ ಧ್ವನಿಯನ್ನಿರಿಸಿಕೊಳ್ಳಿರಿ." ಮತ್ತು ಹೇಳಿರಿ! ಸರ್ವಸ್ತುತಿಗಳೂ ಅಲ್ಲಾಹನಿಗೇ ಮೀಸಲು. ಅವನು ಯಾರನ್ನೂ ಮಗನನ್ನಾಗಿ ಮಾಡಿಕೊಳ್ಳಲಿಲ್ಲ. ಅವನ ಪ್ರಭುತ್ವದಲ್ಲಿ ಯಾರೂ ಸಹಭಾಗಿಯಿಲ್ಲ. ಅವನಿಗೊಬ್ಬ ರಕ್ಷಕ ಮಿತ್ರನಿದ್ದಾನೆನ್ನಲು ಅವನೇನೂ ವಿವಶನಲ್ಲ. ಅವನ ಹಿರಿಮೆಯನ್ನು ಪರಿಪೂರ್ಣವಾದ ಹಿರಿಮೆಯನ್ನು ಕೊಂಡಾಡಿರಿ.[6] **(ಪವಿತ್ರ ಕುರ್‌ಆನ್, 17:110-111)**

5. ಹ. ಅಬೂದರ್ದಾ(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಹೇಳಿದರು: ಈ ಸೂಕ್ತವನ್ನು ಸಂಜೆ ಮುಂಜಾನೆಗಳಲ್ಲಿ ಯಾರು ಏಳು ಸಲ ಪಠಿಸುತ್ತಾನೋ ಆತನ ಇಹ ಮತ್ತು ಪರಲೋಕಗಳ ಎಲ್ಲ ಕಾರ್ಯಗಳಿಗೆ ಅಲ್ಲಾಹನೇ ಸಾಕು (ಅಬೂದಾವೂದ್) ಈ ಸೂಕ್ತವನ್ನು 7 ಸಲ ಪಠಿಸಿರಿ.
6. ಹ. ಅಬೂ ಮೂಸಾ ಅಶ್‌ಅರಿ(ರ) ವರದಿ. ಪ್ರವಾದಿ(ಸ) ಹೇಳಿರುವರು- "ಖಲಿದ್‌ಊಲ್ಲಾಹ ಅವಿದ್‌ಊರ್ರಹ್ಮಾನ..." ಈ ಸೂಕ್ತವನ್ನು ಯಾರು ಬೆಳಿಗ್ಗೆ ಅಥವಾ ಮುಸ್ಸಂಜೆ ಪಠಿಸುವನೋ ಆ ದಿವಸ ಮತ್ತು ರಾತ್ರಿ ಆತನ ಹೃದಯ ನಿರ್ಜೀವವಾಗದು.

بِسْمِ اللّٰهِ الرَّحْمٰنِ الرَّحِيْمِ – اَفَحَسِبْتُمْ اَنَّمَا خَلَقْنٰكُمْ عَبَثًا
وَّ اَنَّكُمْ اِلَيْنَا لاَ تُرْجَعُوْنَo فَتَعٰلَى اللّٰهُ الْمَلِكُ الْحَقُّ لَآ اِلٰهَ
اِلَّا هُوَ رَبُّ الْعَرْشِ الْكَرِيْمِo وَمَنْ يَّدْعُ مَعَ اللّٰهِ اِلٰـهًا 'اٰخَرَ
لاَ بُرْهَانَ لَهٗ بِهٖ فَاِنَّمَا حِسَابُهٗ عِنْدَ رَبِّهٖ اِنَّهٗ لاَ يُفْلِحُ الْكٰفِرُوْنَo
وَ قُلْ رَّبِّ اغْفِرْ وَارْحَمْ وَ اَنْتَ خَيْرُ الرّٰحِمِيْنَo

11. "ನೀವೇನು ನಾವು ನಿಮ್ಮನ್ನು ನಿರರ್ಥಕವಾಗಿ ಸೃಷ್ಟಿಸಿದ್ದೇವೆಂದೂ ನಮ್ಮ ಕಡೆಗೆ ಮರಳಲಿಕ್ಕೇ ಇಲ್ಲವೆಂದೂ ತಿಳಿದುಕೊಂಡಿರಾ?" ಎಂದು ಹೇಳಲಾಗುವುದು. ಅಲ್ಲಾಹನು ಸರ್ವೋನ್ನತನು. ಯಥಾರ್ಥ ಸಾರ್ವಭೌಮನು. ಅವನ ಹೊರತು ಇನ್ನಾವ ದೇವನೂ ಇಲ್ಲ. ಮಹಾ ವಿಶ್ವಸಿಂಹಾಸನದ ಒಡೆಯ. ಯಾರಾದರೂ ಅಲ್ಲಾಹನ ಜೊತೆಗೆ ಯಾವುದೇ ಆಧಾರ ಪ್ರಮಾಣಗಳಿಲ್ಲದ ಆರಾಧ್ಯನನ್ನು ಪ್ರಾರ್ಥಿಸಿದರೆ ಅವನ ಲೆಕ್ಕಾಚಾರ ಅವನ ಪ್ರಭುವಿನ ಬಳಿಯಲ್ಲಿದೆ. ಇಂತಹ ಸತ್ಯನಿಷೇಧಿಗಳು ಎಂದೆಂದಿಗೂ ಯಶಸ್ವಿಯಾಗಲಾರರು. ಪೈಗಂಬರರೇ ಹೇಳಿರಿ; ನನ್ನೊಡೆಯಾ, ಕ್ಷಮಿಸು ಮತ್ತು ಕರುಣೆ ತೋರು; ನೀನು ಸಕಲ ಕರುಣಾಳುಗಳಿಗಿಂತಲೂ ಉತ್ತಮ ಕರುಣಾಮಯಿಯಾಗಿರುತ್ತೀ."[7]

**(ಪವಿತ್ರ ಕುರ್‌ಆನ್, 23:115-118)**

بِسْمِ اللّٰهِ الرَّحْمٰنِ الرَّحِيْمِ – فَسُبْحٰنَ اللّٰهِ حِيْنَ تُمْسُوْنَ وَ
حِيْنَ تُصْبِحُوْنَo وَلَهُ الْحَمْدُ فِى السَّمٰوٰتِ وَالْاَرْضِ وَ
عَشِيًّا وَّ حِيْنَ تُظْهِرُوْنَo يُخْرِجُ الْحَيَّ مِنَ الْمَيِّتِ وَ يُخْرِجُ
الْمَيِّتَ مِنَ الْحَيِّ وَ يُحْيِ الْاَرْضَ بَعْدَ مَوْتِهَا وَ كَذٰلِكَ
تُخْرَجُوْنَo وَمِنْ 'اٰيٰتِهٖٓ اَنْ خَلَقَكُمْ مِّنْ تُرَابٍ ثُمَّ اِذَآ اَنْتُمْ بَشَرٌ
تَنْتَشِرُوْنَo وَ مِنْ 'اٰيٰتِهٖٓ اَنْ خَلَقَ لَكُمْ مِّنْ اَنْفُسِكُمْ اَزْوَاجًا

---

7. ಹ. ಮುಹಮ್ಮದ್ ಬಿನ್ ಇಬ್ರಾಹೀಮ್ ತೈಮಿ ತನ್ನ ತಂದೆಯವರಿಂದ ವರದಿ ಮಾಡಿರುವರು. ಅವರು ಹೇಳಿದರು- ಪ್ರವಾದಿ(ಸ) ಒಂದು ಕಾರ್ಯಾಚರಣೆಗಾಗಿ ನಮ್ಮನ್ನು ಕಳುಹಿಸುತ್ತಾ ಹೇಳಿದರು: ಸಂಜೆ ಮುಂಜಾನೆಯ ಸಮಯಗಳಲ್ಲಿ ಮೇಲಿನ ಸೂಕ್ತಗಳನ್ನು ಪಠಿಸುತ್ತಲಿರಿ. ನಾವು ಹಾಗೆಯೇ ಮಾಡಿದೆವು ಮತ್ತು ಆ ಕಾರ್ಯಾಚರಣೆಯಲ್ಲಿ ವಿಜಯ ಸಾಧಿಸಿ ಸಮರಾರ್ಜಿತ ಸಂಪತ್ತಿನೊಂದಿಗೆ ಮರಳಿದೆವು.

لِّتَسْكُنُوْٓا اِلَيْهَا وَ جَعَلَ بَيْنَكُمْ مَّوَدَّةً وَّ رَحْمَةً اِنَّ فِىْ ذٰلِكَ
لَاٰيٰتٍ لِّقَوْمٍ يَّتَفَكَّرُوْنَo وَ مِنْ اٰيٰتِهٖ خَلْقُ السَّمٰوٰتِ وَالْاَرْضِ
وَاخْتِلَافُ اَلْسِنَتِكُمْ وَ اَلْوَانِكُمْ اِنَّ فِىْ ذٰلِكَ لَاٰيٰتٍ لِّلْعٰلِمِيْنَo
وَ مِنْ اٰيٰتِهٖ مَنَامُكُمْ بِالَّيْلِ وَالنَّهَارِ وَابْتِغَآؤُكُمْ مِّنْ فَضْلِهٖ اِنَّ
فِىْ ذٰلِكَ لَاٰيٰتٍ لِّقَوْمٍ يَّسْمَعُوْنَo وَ مِنْ اٰيٰتِهٖ يُرِيْكُمُ الْبَرْقَ
خَوْفًا وَّ طَمَعًا وَّ يُنَزِّلُ مِنَ السَّمَآءِ مَآءً فَيُحْىٖ بِهِ الْاَرْضَ
بَعْدَ مَوْتِهَا اِنَّ فِىْ ذٰلِكَ لَاٰيٰتٍ لِّقَوْمٍ يَّعْقِلُوْنَo وَ مِنْ اٰيٰتِهٖٓ اَنْ
تَقُوْمَ السَّمَآءُ وَالْاَرْضُ بِاَمْرِهٖ ثُمَّ اِذَا دَعَاكُمْ دَعْوَةً مِّنَ
الْاَرْضِ اِذَآ اَنْتُمْ تَخْرُجُوْنَo وَ لَهٗ مَنْ فِى السَّمٰوٰتِ وَالْاَرْضِ
كُلٌّ لَّهٗ قٰنِتُوْنَo

12. ನೀವು ಸಂಧ್ಯಾಕಾಲ ಬಂದಾಗಲೂ ಪ್ರಾತಃಕಾಲವಾದಾಗಲೂ ಅಲ್ಲಾಹನ ಗುಣಗಾನ(ತಸ್ಬೀಹ್) ಮಾಡಿರಿ. ಭೂಮಿ-ಆಕಾಶಗಳಲ್ಲಿ ಸ್ತುತಿ ಸ್ತೋತ್ರಗಳು ಅವನಿಗೇ ಮೀಸಲು ಮತ್ತು ಮೂರನೆಯ ಜಾವದಲ್ಲೂ, ನಿಮಗೆ ಝುಹ್ರ್ ಸಮಯ ಬಂದಾಗಲೂ (ಅವನ ಗುಣಗಾನ ಮಾಡಿರಿ) ಅವನು ಸಜೀವಿಯನ್ನು ನಿರ್ಜೀವಿಯಿಂದ ಹೊರತೆಗೆಯುತ್ತಾನೆ, ನಿರ್ಜೀವಿಯನ್ನು ಸಜೀವಿಯಿಂದ ಹೊರತೆಗೆಯುತ್ತಾನೆ ಮತ್ತು ಭೂಮಿಗೆ ಅದರ ಮರಣದ ಬಳಿಕ ಮತ್ತೆ ಜೀವದಾನ ಮಾಡುತ್ತಾನೆ, ಇದೇ ರೀತಿಯಲ್ಲಿ ನೀವು (ಮರಣಾವಸ್ಥೆಯಿಂದ) ಹೊರತೆಗೆಯಲ್ಪಡುವಿರಿ, ಅವನು ನಿಮ್ಮನ್ನು ಮಣ್ಣಿನಿಂದ ಸೃಷ್ಟಿಸಿದುದು, ತರುವಾಯ ಒಮ್ಮೆಲೇ ನೀವು ಮಾನವರಾಗಿ (ಭೂಮಿಯಲ್ಲಿ) ಹಬ್ಬುತ್ತಾ ಹೋಗುತ್ತಿರುವುದು ಅವನ ನಿದರ್ಶನಗಳಲ್ಲೊಂದಾಗಿದೆ. ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು ಸೃಷ್ಟಿಸಿ, ನೀವು ಅವರ ಬಳಿ ಪ್ರಶಾಂತಿಯನ್ನು ಪಡೆಯುವಂತೆ ಮಾಡಿದುದು ಮತ್ತು ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪವನ್ನುಂಟು ಮಾಡಿದುದು ಅವನ ನಿದರ್ಶನಗಳ ಲ್ಲೊಂದಾಗಿದೆ. ನಿಶ್ಚಯವಾಗಿಯೂ ವಿವೇಚಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ. ಆಕಾಶಗಳ ಮತ್ತು ಭೂಮಿಯ ಸೃಷ್ಟಿಯೂ ನಿಮ್ಮ ಭಾಷೆಗಳ ಹಾಗೂ ವರ್ಣಗಳ ತಾರತಮ್ಯವೂ ಅವನ ನಿದರ್ಶನಗಳಲ್ಲಿ ಒಂದಾಗಿದೆ. ನಿಶ್ಚಯವಾಗಿಯೂ ಜ್ಞಾನಿಗಳಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ. ಇರುಳು ಹಗಲುಗಳಲ್ಲಿ ನಿಮ್ಮ ನಿದ್ರೆಯೂ ನೀವು ಅವನ

ಅನುಗ್ರಹವನ್ನರಸುವುದೂ ಅವನ ನಿದರ್ಶನಗಳಲ್ಲೊಂದಾಗಿದೆ. ನಿಶ್ಚಯವಾಗಿಯೂ ಲಕ್ಷ್ಯವಿಟ್ಟು ಆಲಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ. ಅವನು ನಿಮಗೆ ಭಯದೊಂದಿಗೂ ನಿರೀಕ್ಷೆಯೊಂದಿಗೂ ಮಿಂಚಿನ ಹೊಳಪನ್ನು ತೋರಿಸುವುದು ಹಾಗೂ ಆಕಾಶದಿಂದ ನೀರನ್ನು ಸುರಿಸುವುದು ಅನಂತರ ಅದರ ಮೂಲಕ ನೆಲಕ್ಕೆ ಅದರ ಮರಣದ ಬಳಿಕ ಮತ್ತೆ ಜೀವ ನೀಡುವುದು ಅವನ ನಿದರ್ಶನಗಳಲ್ಲಿ ಸೇರಿವೆ. ನಿಶ್ಚಯವಾಗಿಯೂ ವಿವೇಕಿಗಳಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ. ಆಕಾಶ ಮತ್ತು ಭೂಮಿ ಅವನ ಅಪ್ಪಣೆಯಿಂದ ಸ್ಥಾಪಿತವಾಗಿರುವುದು ಅವನ ನಿದರ್ಶನಗಳಲ್ಲೊಂದಾಗಿದೆ. ಮುಂದೆ ಅವನು ನಿಮ್ಮನ್ನು ಭೂಮಿಯಿಂದ ಕೂಗಿ ಕರೆದೊಡನೆ ಒಂದೇ ಕರೆಗೆ ನೀವು ಥಟ್ಟನೆ ಹೊರಟು ಬರುವಿರಿ. ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಎಲ್ಲರೂ ಅವನ ದಾಸರು. ಎಲ್ಲರೂ ಅವನ ಆಜ್ಞಾಧೀನರೇ ಆಗಿರುತ್ತಾರೆ.[8] (ಪವಿತ್ರ ಕುರ್‌ಆನ್, 30:17-26)

بِسْمِ اللّٰهِ الرَّحْمٰنِ الرَّحِيْمِ – حٰمٓ ۝ تَنْزِيْلُ الْكِتٰبِ مِنَ اللّٰهِ
الْعَزِيْزِ الْعَلِيْمِ ۝ غَافِرِ الذَّنْبِ وَ قَابِلِ التَّوْبِ شَدِيْدِ الْعِقَابِ
ذِى الطَّوْلِ لَآ اِلٰهَ اِلَّا هُوَ اِلَيْهِ الْمَصِيْرُ ۝

13. ಹಾಮೀಮ್. ಈ ಗ್ರಂಥದ ಅವತೀರ್ಣವು ಅಲ್ಲಾಹನ ಕಡೆಯಿಂದಾಗಿರುತ್ತದೆ. ಅವನು ಪ್ರಬಲನೂ ಸರ್ವಜ್ಞನೂ ಪಾಪಗಳನ್ನು ಕ್ಷಮಿಸುವವನೂ ಪಶ್ಚಾತ್ತಾಪ ಸ್ವೀಕರಿಸುವವನೂ ಕಠಿಣ ಶಿಕ್ಷೆ ಕೊಡುವವನೂ ಮಹಾ ಅನುಗ್ರಹಿಯೂ ಆಗಿರುತ್ತಾನೆ. ಅವನ ಹೊರತು ಬೇರೆ ಆರಾಧ್ಯರಿಲ್ಲ. ಸರ್ವರಿಗೂ ಅವನ ಕಡೆಗೆ ಮರಳಬೇಕಾಗಿದೆ.[9] (ಪವಿತ್ರ ಕುರ್‌ಆನ್, 40:1-3)

---

8. ಪ್ರವಾದಿ(ಸ) ಹೇಳಿರುವುದಾಗಿ ಹ.ಇಬ್ನು ಅಬ್ಬಾಸ್ ಈ ರೀತಿ ವರದಿ ಮಾಡಿದ್ದಾರೆ. ಯಾರು ಬೆಳಗಿನ ಜಾವದಲ್ಲಿ "ಫಸುಬ್ಹಾನಲ್ಲಾಹಿ ಹೀನ ತುಮ್‌ಸೂನ ವ ಹೀನ ತುಸ್ಬಿಹೂನ... ವಕದಾಲಿಕ ತುಖ್‌ರಜೂನ್" ಈ ಸೂಕ್ತಗಳನ್ನು ಪಠಿಸಿದನೋ, ಆತನಿಂದ ಆ ದಿನ ಬಿಟ್ಟು ಹೋದಂತಹ ಕರ್ಮಗಳ ಪ್ರತಿಫಲ ಸಿಗುವುದು. ಯಾರು ಸಂಜೆಯ ವೇಳೆ ಅದನ್ನು ಪಠಿಸಿದನೋ ಆ ರಾತ್ರಿ ತಪ್ಪಿ ಹೋದಂತಹ ಎಲ್ಲ ಕರ್ಮಗಳ ಪ್ರತಿಫಲವೂ ಆತನಿಗೆ ಸಿಗುವುದು. (ಅಬೂದಾವೂದ್)

9. ಹ. ಅಬೂ ಹುರೈರಾರಿಂದ(ರ) ವರದಿಯಾಗಿದೆ. ಪ್ರವಾದಿ(ಸ) ಹೇಳಿದ್ದಾರೆ, "ಯಾವ ವ್ಯಕ್ತಿ ಹಾಮೀಮ್‌ನಿಂದ ಅಲ್ ಮಸೀರ್ ತನಕದ ಸೂರಃ ಮೂಮಿನ್‌ನ ಸೂಕ್ತಗಳನ್ನು ಮತ್ತು ಆಯತುಲ್ ಕುರ್ಸಿಯನ್ನು ಪ್ರಭಾತದ ಸಮಯ ಪಠಿಸಿದನೋ ಆ ಸೂಕ್ತಗಳ ಫಲಶ್ರುತಿಯಾಗಿ ಬೆಳಗ್ಗಿನಿಂದ ಸಂಜೆಯ ವರೆಗೆ ಸುರಕ್ಷಿತನಾಗಿರುವನು ಮತ್ತು ಸಂಜೆಯ ವೇಳೆ ಪಠಿಸಿದರೆ ಅದರಿಂದಾಗಿ ಸಂಜೆಯಿಂದ ಬೆಳಗ್ಗಿನ ವರೆಗೆ ಸುರಕ್ಷಿತನಾಗಿರುವನು." (ತಿರ್ಮಿದಿ, ದಾರಿಮಿ)

بِسْمِ اللّٰهِ الرَّحْمٰنِ الرَّحِيْمِ – هُوَ اللّٰهُ الَّذِىْ لَآ اِلٰـهَ اِلَّا هُوَ
عٰلِمُ الْغَيْبِ وَالشَّهَادَةِ هُوَ الرَّحْمٰنُ الرَّحِيْمُo هُوَ اللّٰهُ الَّذِىْ
لَآ اِلٰـهَ اِلَّا هُوَ اَلْمَلِكُ الْقُدُّوْسُ السَّلٰمُ الْمُؤْمِنُ الْمُهَيْمِنُ
الْعَزِيْزُ الْجَبَّارُ الْمُتَكَبِّرُ سُبْحٰنَ اللّٰهِ عَمَّا يُشْرِكُوْنَo هُوَ اللّٰهُ
الْخَالِقُ الْبَارِئُ الْمُصَوِّرُ لَهُ الْاَسْمَآءُ الْحُسْنٰى يُسَبِّحُ لَهُ مَا
فِى السَّمٰوٰتِ وَالْاَرْضِ وَ هُوَ الْعَزِيْزُ الْحَكِيْمُo

14. ಅವನೇ ಅಲ್ಲಾಹ್, ಅವನ ಹೊರತು ಬೇರಾವ ಆರಾಧ್ಯನೂ ಇಲ್ಲ. ಅಗೋಚರವಾದ ಮತ್ತು ಗೋಚರವಾಗಿರುವ ಎಲ್ಲವನ್ನೂ ಬಲ್ಲವನು. ಅವನೇ ಪರಮ ದಯಾಮಯನೂ ಕರುಣಾನಿಧಿಯೂ ಆಗಿರುತ್ತಾನೆ. ಅವನೇ ಅಲ್ಲಾಹ್, ಅವನ ಹೊರತು ಬೇರಾವ ಆರಾಧ್ಯನೂ ಇಲ್ಲ. ಅವನು ಸಾಮ್ರಾಟನು, ಪರಮ ಪಾವನನು, ಸಾದ್ಯಂತ ಮಂಗಲಮಯನು, ಶಾಂತಿದಾತನು, ಸಂರಕ್ಷಕನು, ಪ್ರಬಲನು, ತನ್ನ ಆಜ್ಞೆಯನ್ನು ಶಕ್ತಿಯಿಂದ ಅನುಷ್ಠಾನಿಸಿ ಬಿಡುವವನು, ಸದಾ ಸರ್ವೋನ್ನತನಾಗಿಯೇ ಇರುವವನು, ಜನರು ಮಾಡುತ್ತಿರುವ ಸಹಭಾಗಿತ್ವದಿಂದ ಅಲ್ಲಾಹನು ಪರಿಶುದ್ಧನು. ಸೃಷ್ಟಿಯ ಯೋಜನೆ ಮಾಡುವವನೂ ಅದನ್ನು ಜಾರಿಗೊಳಿಸುವವನೂ ಅದರಂತೆ ರೂಪ ಕೊಡುವವನೂ ಅಲ್ಲಾಹನೇ. ಅವನಿಗೆ ಅತ್ಯುತ್ತಮ ನಾಮಗಳಿವೆ. ಭೂಮಿ ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವೂ ಅವನನ್ನು ಜಪಿಸುತ್ತಿದೆ ಮತ್ತು ಅವನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.[10]

**(ಪವಿತ್ರ ಕುರ್‌ಆನ್, 59:22-24)**

بِسْمِ اللّٰهِ الرَّحْمٰنِ الرَّحِيْمِ – اِذَا زُلْزِلَتِ الْاَرْضُ زِلْزَالَهَاo
وَ اَخْرَجَتِ الْاَرْضُ اَثْقَالَهَاo وَ قَالَ الْاِنْسَانُ مَالَهَاo يَوْمَئِذٍ
تُحَدِّثُ اَخْبَارَهَاo بِاَنَّ رَبَّكَ اَوْحٰى لَهَاo يَوْمَئِذٍ يَّصْدُرُ

10. ಹ. ಅಬೂಉಮಾಮರಿಂದ ವರದಿಯಾಗಿದೆ. ಪ್ರವಾದಿ(ಸ) ಹೇಳಿದರು- "ಯಾರು ಹಗಲು ಅಥವಾ ರಾತ್ರಿಯ ವೇಳೆ ಸೂರತುಲ್ ಹಶ್ರ್‌ನ ಕೊನೆಯ ಸೂಕ್ತಗಳನ್ನು ಪಠಿಸಿದನೋ ಬಳಿಕ ಅಂದೇ ಹಗಲು ಅಥವಾ ರಾತ್ರಿ ಆತನು ಮರಣ ಹೊಂದಿದರೆ ಅಲ್ಲಾಹನು ಆತನಿಗೆ ಸ್ವರ್ಗದ ವಾಗ್ದಾನ ಕೊಟ್ಟಿರುವನು." **(ಬೈಹಕಿ)**

النَّاسُ اَشْتَاتًا لِّيُرَوْا اَعْمَالَهُمْ ۝ فَمَنْ يَّعْمَلْ مِثْقَالَ ذَرَّةٍ
خَيْرًا يَّرَهُ ۝ وَ مَنْ يَّعْمَلْ مِثْقَالَ ذَرَّةٍ شَرًّا يَّرَهُ ۝

15. ಭೂಮಿಯು ತನ್ನ ಸಂಪೂರ್ಣ ಉಗ್ರತೆಯೊಂದಿಗೆ ಕುಲಕಲ್ಪಡುವಾಗ, ಭೂಮಿಯು ತನ್ನೊಳಗಿನ ಸಕಲ ಹೊರೆಗಳನ್ನು ಹೊರಹಾಕಿ ಬಿಡುವಾಗ ಮತ್ತು ಮನುಷ್ಯನು ಇದಕ್ಕೇನಾಗುತ್ತಿದೆ ಎನ್ನುವಾಗ, ಅಂದು ಅದು ತನ್ನ (ಮೇಲೆ ಗತಿಸಿದ) ಸ್ಥಿತಿಗತಿಗಳನ್ನು ವಿವರಿಸುವುದು. ಏಕೆಂದರೆ ನಿನ್ನ ಪ್ರಭು ಅದಕ್ಕೆ (ಹಾಗೆ ಮಾಡಬೇಕೆಂದು) ಅಪ್ಪಣೆ ಕೊಟ್ಟಿರುವನು. ಅಂದು ಜನರು ವಿಭಿನ್ನ ಸ್ಥಿತಿಗಳಲ್ಲಿ ಮರಳುವರು. (ಇದು) ಅವರ ಕರ್ಮಗಳು ಅವರಿಗೆ ತೋರಿಸಲ್ಪಡಲಿಕ್ಕಾಗಿ, ತರುವಾಯ ಅಣು ಗಾತ್ರದಷ್ಟು ಪುಣ್ಯ ಕಾರ್ಯವೆಸಗಿದನು, ಅದನ್ನು ಕಂಡೇ ತೀರುವನು ಮತ್ತು ಅಣು ಗಾತ್ರದಷ್ಟು ಪಾಪ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು.[11] (ಪವಿತ್ರ ಕುರ್‌ಆನ್, 99:1-8)

بِسْمِ اللّٰهِ الرَّحْمٰنِ الرَّحِيْمِ – قُلْ يٰٓاَيُّهَا الْكٰفِرُوْنَ ۝ لَآ اَعْبُدُ
مَا تَعْبُدُوْنَ ۝ وَلَآ اَنْتُمْ عٰبِدُوْنَ مَآ اَعْبُدُ ۝ وَلَآ اَنَا عَابِدٌ مَّا
عَبَدْتُّمْ ۝ وَلَآ اَنْتُمْ عٰبِدُوْنَ مَآ اَعْبُدُ ۝ لَكُمْ دِيْنُكُمْ وَلِيَ دِيْنِ ۝

16. ಹೇಳಿ ಬಿಡಿರಿ! ಓ ಸತ್ಯ ನಿಷೇಧಿಗಳೇ, ನೀವು ಆರಾಧಿಸುವವುಗಳನ್ನು ನಾನು ಆರಾಧಿಸುವುದಿಲ್ಲ. ಮತ್ತು ನಾನು ಆರಾಧಿಸುವವನನ್ನು ನೀವು ಆರಾಧಿಸುವವರಲ್ಲ. ಮತ್ತು ನೀವು ಆರಾಧಿಸಿದವುಗಳ ಆರಾಧನೆಯನ್ನು ನಾನೂ ಮಾಡುವವನಲ್ಲ. ನಾನು ಆರಾಧಿಸುವವನನ್ನು ನೀವು ಆರಾಧಿಸುವವರಲ್ಲ. ನಿಮಗೆ ನಿಮ್ಮ ಧರ್ಮ ಮತ್ತು ನನಗೆ ನನ್ನ ಧರ್ಮ.[12]
(ಪವಿತ್ರ ಕುರ್‌ಆನ್, 109:1-6)

بِسْمِ اللّٰهِ الرَّحْمٰنِ الرَّحِيْمِ – اِذَا جَآءَ نَصْرُ اللّٰهِ وَالْفَتْحُ ۝ وَ
رَاَيْتَ النَّاسَ يَدْخُلُوْنَ فِيْ دِيْنِ اللّٰهِ اَفْوَاجًا ۝ فَسَبِّحْ بِحَمْدِ
رَبِّكَ وَاسْتَغْفِرْهُ اِنَّهٗ كَانَ تَوَّابًا ۝

11. ಪ್ರವಾದಿ(ಸ) ಹೇಳಿದರು "ಅಝ್ಝಿಲ್‌ಝಿಲಾಲ್ ಅರ್ಧ ಕುರ್‌ಆನಿಗೆ ಸಮಾನವಾಗಿದೆ.
[ವರದಿ- ಇಬ್ನು ಅಬ್ಬಾಸ್(ರ), ತಿರ್ಮಿದಿ, ಹಾಕಿಮ್]

12. ಹ. ಇಬ್ನು ಅಬ್ಬಾಸ್‌ರಿಂದ(ರ) ವರದಿಯಾದ ಹದೀಸ್‌ನಲ್ಲಿ 'ಅಲ್ ಕಾಫಿರೂನ್' ಅಧ್ಯಾಯವು ಪವಿತ್ರ ಕುರ್‌ಆನಿನ ಕಾಲು ಭಾಗಕ್ಕೆ ಸಮಾನವಾಗಿದೆಯೆಂದಿದೆ. (ತಿರ್ಮಿದಿ, ಬೈಹಕಿ)

17. ಅಲ್ಲಾಹನ ಸಹಾಯ ಬಂದು ಬಿಟ್ಟಾಗ ಮತ್ತು ವಿಜಯ ಪ್ರಾಪ್ತವಾದಾಗ ಮತ್ತು (ಸಂದೇಶವಾಹಕರೇ) ಜನರು ತಂಡೋಪತಂಡವಾಗಿ ಅಲ್ಲಾಹನ ಧರ್ಮದಲ್ಲಿ ಪ್ರವೇಶಿಸುತ್ತಿರುವುದನ್ನು ನೀವು ಕಂಡಾಗ. ನಿಮ್ಮ ಪ್ರಭುವಿನ ಪ್ರಶಂಸೆಯೊಂದಿಗೆ ಅವನ ಕೀರ್ತನೆ ಮಾಡಿರಿ ಮತ್ತು ಅವನೊಡನೆ ಕ್ಷಮೆಯಾಚಿಸಿರಿ. ನಿಸ್ಸಂದೇಹವಾಗಿಯೂ ಅವನು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನಾಗಿರುತ್ತಾನೆ. (ಪವಿತ್ರ ಕುರ್‌ಆನ್, 110:1-3)

بِسْمِ اللّٰهِ الرَّحْمٰنِ الرَّحِيْمِ – قُلْ هُوَ اللّٰهُ اَحَدٌ ۝ اَللّٰهُ الصَّمَدُ ۝ لَمْ يَلِدْ وَلَمْ يُوْلَدْ ۝ وَلَمْ يَكُنْ لَّهٗ كُفُوًا اَحَدٌ ۝

18. ಹೇಳಿರಿ ಅವನು ಏಕೈಕನು. ಅಲ್ಲಾಹನು ಸಕಲರಿಂದಲೂ ನಿರಪೇಕ್ಷನು ಮತ್ತು ಸರ್ವರೂ ಅವನ ಅವಲಂಬಿತರು. ಅವನಿಗೆ ಯಾವುದೇ ಸಂತಾನವಿಲ್ಲ. ಅವನು ಯಾರ ಸಂತಾನವೂ ಅಲ್ಲ ಮತ್ತು ಅವನಿಗೆ ಸರಿಸಮಾನರು ಯಾರೂ ಇಲ್ಲ.[13]
(ಪವಿತ್ರ ಕುರ್‌ಆನ್, 112:1-4)

بِسْمِ اللّٰهِ الرَّحْمٰنِ الرَّحِيْمِ – قُلْ اَعُوْذُ بِرَبِّ الْفَلَقِ ۝ مِنْ شَرِّ مَا خَلَقَ ۝ وَ مِنْ شَرِّ غَاسِقٍ اِذَا وَقَبَ ۝ وَ مِنْ شَرِّ النَّفّٰثٰتِ فِى الْعُقَدِ ۝ وَ مِنْ شَرِّ حَاسِدٍ اِذَا حَسَدَ ۝

19. ಹೇಳಿರಿ- ನಾನು ಮುಂಜಾವಿನ ಪ್ರಭುವಿನ ಅಭಯ ಯಾಚಿಸುತ್ತೇನೆ. ಅವನು (ಅಲ್ಲಾಹನು) ಸೃಷ್ಟಿಸಿದ ಸಕಲ ವಸ್ತುಗಳ ಕೇಡಿನಿಂದ, ಇರುಳಿನ ಅಂಧಕಾರವು ಕವಿದಾಗ ಉಂಟಾಗುವ ಕೇಡಿನಿಂದ, ಗಂಟುಗಳ ಮೇಲೆ ಊದುವವರ (ಅಥವಾ ಹಾಗೆ ಊದುವ ಸ್ತ್ರೀಯರ) ಕೇಡಿನಿಂದ ಮತ್ತು ಮತ್ಸರಿಯು ಮತ್ಸರಪಡುವಾಗ ಅವನ ಕೇಡಿನಿಂದ (ಅಭಯ ಯಾಚಿಸುತ್ತೇನೆ). (ಪವಿತ್ರ ಕುರ್‌ಆನ್, 113:1-5)

13. ಹ. ಅಬ್ದುಲ್ಲ ಬಿನ್ ಖುಬೈಬ್(ರ) ಹೇಳುತ್ತಾರೆ- ನಾವು ಒಂದು ರಾತ್ರಿ ನಮಗೆ ನಮಾಝ್ ಮಾಡಿಸಬೇಕೆಂದು ಕರೆಯಲು ಪ್ರವಾದಿಯವರ(ಸ) ಬಳಿ ಹೋದೆವು. ಆ ರಾತ್ರಿ ಮಳೆ ಸುರಿಯುತ್ತಿತ್ತು. ಅಂಧಕಾರ ಕವಿದಿತ್ತು. ಅವರು(ಸ) ಹೇಳಿದರು "ಕುಲ್" ನಾನು ಉತ್ತರಿಸಲಿಲ್ಲ. ಅವರು(ಸ) ಹೇಳಿದರು, "ಕುಲ್." ನಾನು ಮೌನವಾಗಿದ್ದೆ. ಅವರು ಪುನಃ 'ಕುಲ್' ಹೇಳಿದರು. ನಾನು ನಿವೇದಿಸಿದೆ. "ಓ ಪೈಗಂಬರರೇ ನಾನೇನು ಹೇಳಲಿ?" ಅವರು(ಸ) ಹೇಳಿದರು- ಸೂರಃಇಖ್‌ಲಾಸ್ ಮತ್ತು ಮುಅವ್ವಿದತೈನ್- ಈ ಮೂರು ಅಧ್ಯಾಯಗಳನ್ನು ಸಂಜೆ ಮತ್ತು ಮುಂಜಾನೆ ಮೂರು ಮೂರು ಸಲ ಪಠಿಸಿರಿ. ಇದು ನಿಮ್ಮನ್ನು ಎಲ್ಲ ವಸ್ತುಗಳಿಂದ ಪಾರುಗೊಳಿಸುವುದು ಅರ್ಥಾತ್ ನಿಮಗೆ ಸಾಕಾಗುವುದು. (ಅಬೂದಾವೂದ್, ತಿರ್ಮಿದಿ, ನಸಾಈ)

بِسْمِ اللّٰهِ الرَّحْمٰنِ الرَّحِيْمِ - قُلْ اَعُوْذُ بِرَبِّ النَّاسِo
مَلِكِ النَّاسِo اِلٰهِ النَّاسِo مِنْ شَرِّ الْوَسْوَاسِ الْخَنَّاسِo
اَلَّذِىْ يُوَسْوِسُ فِىْ صُدُوْرِ النَّاسِo مِنَ الْجِنَّةِ وَالنَّاسِo

20. ಹೇಳಿರಿ ನಾನು ಅಭಯ ಯಾಚಿಸುತ್ತೇನೆ- ಮಾನವರ ಪ್ರಭುವಿನ, ಮಾನವರ ಸಾಮ್ರಾಟನ, ಮಾನವರ ನೈಜ ಆರಾಧ್ಯನ- ಪದೇ ಪದೇ ಬಂದು ದುಷ್ಪ್ರೇರಣೆ ನೀಡುವವನ ಕೇಡಿನಿಂದ. ಜನರ ಮನಸ್ಸುಗಳಲ್ಲಿ ದುಷ್ಪ್ರೇರಣೆ ಉಂಟು ಮಾಡುವವನ ಕೇಡಿನಿಂದ. ಅವನು ಯಕ್ಷಗಳ ಪೈಕಿಯಾಗಿರಲಿ, ಮಾನವರ ಪೈಕಿಯಾಗಿರಲಿ.

(ಪವಿತ್ರ ಕುರ್‌ಆನ್, 114:1-6)

اَصْبَحْنَا وَ اَصْبَحَ الْمُلْكُ لِلّٰهِ وَالْحَمْدُ لِلّٰهِ لاَ شَرِيْكَ لَهُ،
لاَ اِلٰهَ اِلَّا هُوَ وَ اِلَيْهِ النُّشُوْرُ۔

"ಅಸ್‌ಬಹ್‌ನಾ ವ ಅಸ್‌ಬಹಲ್ ಮುಲ್ಕು ಲಿಲ್ಲಾಹಿ ವಲ್ ಹಮ್ದು ಲಿಲ್ಲಾಹಿ ಲಾ ಶರೀಕಲಹು, ಲಾ ಇಲಾಹ ಇಲ್ಲಾ ಹುವ ವ ಇಲೈಹಿನ್ನುಷೂರ್" (ಮೂರು ಸಲ)

21. ಅಲ್ಲಾಹನ ಒಡೆತನದಿಂದಾಗಿಯೇ ನಮಗೆ ಮತ್ತು ಇಡೀ ವಿಶ್ವಕ್ಕೆ ಬೆಳಗಾಯಿತು. ಅಲ್ಲಾಹನಿಗೆ ಸರ್ವಸ್ತುತಿಗಳು. ಅವನಿಗಾರೂ ಸಹಭಾಗಿಗಳಿಲ್ಲ. ಆತನ ಹೊರತು ಅನ್ಯ ಆರಾಧ್ಯರಿಲ್ಲ. ಅಂತಿಮವಾಗಿ ಅವನ ಕಡೆಗೇ ಮರಳಬೇಕಾಗಿದೆ.[14]

اَصْبَحْنَا عَلٰى فِطْرَةِ الْاِسْلَامِ، وَكَلِمَةِ الْاِخْلَاصِ وَعَلٰى دِيْنِ
نَبِيِّنَا مُحَمَّدٍ ﷺ، وَ عَلٰى مِلَّةِ اَبِيْنَا اِبْرَاهِيْمَ حَنِيْفًا وَّمَا كَانَ
مِنَ الْمُشْرِكِيْنَ۔

"ಅಸ್‌ಬಹ್‌ನಾ ಅಲಾ ಫಿತ್‌ರತಿಲ್ ಇಸ್ಲಾಮಿ, ವಕಲಿಮತಿಲ್ ಇಖ್‌ಲಾಸಿ ವಅಲಾ ದೀನಿ ನಬಿಯ್ಯಿನಾ ಮುಹಮ್ಮದಿನ್(ಸ), ವ ಅಲಾ ಮಿಲ್ಲತಿ ಅಬೀನಾ ಇಬ್ರಾಹೀಮ ಹನೀಫಂ ವಮಾ ಕಾನ ಮಿನಲ್ ಮುಶ್ರಿಕೀನ್" (ಮೂರು ಸಲ)

22. ಪ್ರಾಕೃತಿಕವಾದ ಇಸ್ಲಾಮ್ ಮತ್ತು ನಾವು ನಿಷ್ಕಳಂಕವಾದ ಪವಿತ್ರ ವಚನ ದಲ್ಲಿದ್ದುಕೊಂಡು, ನಮ್ಮ ಪ್ರವಾದಿ ಹಝ್ರತ್ ಮುಹಮ್ಮದ್(ಸ) ಧರ್ಮದಲ್ಲಿಕೊಂಡು

14. ಹ. ಅಬೂ ಹುರೈರಾರಿಂದ ವರದಿಯಾಗಿದೆ. ಪ್ರಭಾತದ ಸಮಯ ಪ್ರವಾದಿ ಮುಹಮ್ಮದ್(ಸ) "ಅಸ್‌ಬಹ್‌ನಾ ವ ಅಸ್‌ಬಹಲ್ ಮುಲ್ಕು...... ಮತ್ತು ಸಂಜೆಯ ವೇಳೆ ಅಮ್‌ಸೈನಾ ವ ಅಮ್‌ಸಲಲ್ ಮುಲ್ಕು..... ಹೇಳುತ್ತಿದ್ದರು.

ಮತ್ತು ಪರಿಪೂರ್ಣವಾಗಿ ನಿಷ್ಕಳಂಕರಾಗಿದ್ದ ಹಾಗೂ ಬಹುದೇವಾರಾಧಕರಾಗಿರದ ನಮ್ಮ ಪಿತಾಮಹ ಹಝ್ರತ್ ಇಬ್ರಾಹೀಮ್‌ರ(ಅ) ಸಮುದಾಯದಲ್ಲಿದ್ದುಕೊಂಡು ನಮ್ಮ ಪ್ರಭಾತದ ಆರಂಭ ಮಾಡಿದೆವು.[15]

اَللّٰهُمَّ اِنِّیْ اَصْبَحْتُ مِنْکَ فِیْ نِعْمَةٍ وَّ عَافِيَةٍ وَّسِتْرٍ، فَاَتِمَّ عَلَیَّ نِعْمَتَکَ وَ عَافِيَتَکَ وَسِتْرَکَ فِی الدُّنْيَا وَالْاٰخِرَةِ۔

"ಅಲ್ಲಾಹುಮ್ಮ ಇನ್ನೀ ಅಸ್‌ಬಹ್‌ತು ಮಿನ್‌ಕ ಫೀ ನಿಅ್‌ಮತಿನ್ ವ ಆಫಿಯತಿನ್ ವಸಿತ್‌ರಿನ್, ಫಅತಿಮ್ಮ ಅಲಯ್ಯ ನಿಅ್‌ಮತಕ ವ ಆಫಿಯತಕ ವಸಿತ್‌ರಕ ಫಿದ್ದುನ್‌ಯಾ ವಲ್ ಆಖಿರತಿ" (ಮೂರು ಸಲ)

23. ಓ ಅಲ್ಲಾಹನೇ ನೀನು ದಯಪಾಲಿಸಿದ ಅನುಗ್ರಹ ಮತ್ತು ಆರೋಗ್ಯದ ಸ್ಥಿತಿಯಲ್ಲೇ ನನ್ನ ಬೆಳಗಾಯಿತು. ನೀನು ನನ್ನ ದೌರ್ಬಲ್ಯವನ್ನು ಮರೆಮಾಚಿದೆ. ಇದೀಗ ನನ್ನ ಮೇಲೆ ಇಹಲೋಕದಲ್ಲೂ ಪರಲೋಕದಲ್ಲೂ ನಿನ್ನ ಅನುಗ್ರಹ ಮತ್ತು ಆರೋಗ್ಯವನ್ನು ಪೂರ್ಣಗೊಳಿಸು ಮತ್ತು ನನ್ನ ದೌರ್ಬಲ್ಯಗಳನ್ನು ಗುಪ್ತವಾಗಿರಿಸು.[16]

اَللّٰهُمَّ مَا اَصْبَحَ بِیْ مِنْ نِعْمَةٍ اَوْ بِاَحَدٍ مِّنْ خَلْقِکَ فَمِنْکَ وَحْدَکَ لاَ شَرِيْکَ لَکَ، فَلَکَ الْحَمْدُ وَلَکَ الشُّکْرُ۔

"ಅಲ್ಲಾಹುಮ್ಮ ಮಾ ಅಸ್‌ಬಹ ಬೀ ಮಿನ್ ನಿಅ್‌ಮತಿನ್ ಅವ್ ಬಿಅಹ್‌ದಿಮ್ಮಿನ್ ಖಲ್ಕಿಕ ಫಮಿನ್‌ಕ ವಹ್‌ದಕ ಲಾ ಶರೀಕ ಲಕ, ಫಲಕಲ್‌ಹಮ್ದು ವಲಕ ಶ್ಶುಕ್ರು" (ಮೂರು ಸಲ)

24. ಓ ಅಲ್ಲಾಹನೇ, ನನಗೆ ಅಥವಾ ನಿನ್ನ ಸೃಷ್ಟಿಗಳಿಗೆ ಲಭಿಸಿದ ಅನುಗ್ರಹಗಳೆಲ್ಲವೂ ಕೇವಲ ನಿನ್ನಿಂದಲೇ ಪ್ರಾಪ್ತವಾಗಿದೆ. ನೀನು ಏಕೈಕನು. ನಿನಗಾರೂ ಸಹಭಾಗಿಗಳಿಲ್ಲ. ಪ್ರಶಂಸೆ ಮತ್ತು ಕೃತಜ್ಞತೆಗೆ ನೀನೇ ಅರ್ಹನಾಗಿರುತ್ತೀ.[17]

---

15. ಹ. ಉಬೈ ಬಿನ್ ಕಅಬ್‌ರಿಂದ(ರ) ವರದಿಯಾಗಿದೆ. ಈ ದುವಾದೊಂದಿಗೆ ಬೆಳಗಾಗಿಸಲು ಪ್ರವಾದಿ(ಸ) ನಮಗೆ ಕಲಿಸಿಕೊಡುತ್ತಿದ್ದರು; 'ಅಸ್‌ಬಹ್‌ನಾ ಅಲಾ ಫಿತ್ರತಿನ್ ಮತ್ತು ಸಂಜೆಯ ವೇಳೆಯೂ ಈ ದುವಾ ಮಾಡಿರಿ (ಅಸ್‌ಬಹ್‌ನಾ... ದ ಬದಲು ಅಮ್‌ಸೈನಾ ಎಂದು ಹೇಳಿರಿ)

16. ಹ.ಇಬ್ನು ಅಬ್ಬಾಸ್(ರ) ವರದಿ ಮಾಡಿದ್ದಾರೆ. ಪ್ರವಾದಿ(ಸ) ಹೇಳಿದರು- ಯಾರು ಸಂಜೆ ಮುಂಜಾನೆ "ಅಸ್‌ಬಹ್‌ನಾ ವಅಸ್‌ಬಹಲ್ ಮುಲ್ಕು... ಮತ್ತು ಸಂಜೆ ವೇಳೆ ಅಮ್‌ಸೈನಾ ವಅಮ್‌ಸಅಲ್ ಮುಲ್ಕು" ಈ ದುವಾ ಪಠಿಸುತ್ತಾನೋ ಆತನ ಮೇಲೆ ತನ್ನ ಅನುಗ್ರಹಗಳನ್ನು ಪೂರ್ಣಗೊಳಿಸುವುದು ಅಲ್ಲಾಹನ ಹಕ್ಕಾಗಿರುತ್ತದೆ.

17. ಪ್ರವಾದಿ(ಸ) ಹೇಳಿದರು- "ಯಾವ ವ್ಯಕ್ತಿ ಬೆಳಗ್ಗಿನ ಜಾವ "ಅಲ್ಲಾಹುಮ್ಮ ಮಾ ಅಸ್‌ಬಹ ಬೀ..." ಎಂಬ ದುವಾ ಮಾಡಿದನೋ ಆತ ಆ ದಿನದ ಕೃತಜ್ಞತೆ ಸಲ್ಲಿಸಿದ ಮತ್ತು ಮುಸ್ಸಂಜೆಯ

يَا رَبِّيْ لَكَ الْحَمْدُ كَمَا يَنْبَغِيْ لِجَلاَلِ وَجْهِكَ وَ عَظِيْمِ سُلْطَانِكَ۔

**"ಯಾರಬ್ಬೀ ಲಕಲ್ ಹಮ್ದು ಕಮಾ ಯಂಬಗೀ ಲಿ ಜಲಾಲಿ ವಜ್‌ಹಿಕ ವ ಅಝೀಮಿ ಸುಲ್ತಾನಿಕ." (ಮೂರು ಸಲ)**

25. ಓ ನನ್ನ ಪ್ರಭೂ, ನಾವು ನಿನ್ನ ಸುಂದರ ಮುಖಾರವಿಂದ ಮತ್ತು ನಿನ್ನ ಮಹಾನ್ ಪ್ರಭುತ್ವಕ್ಕೆ ಅನುಗುಣವಾದ ಪ್ರಶಂಸೆಯನ್ನು ಮಾಡುತ್ತೇವೆ.[18]

رَضِيْتُ بِاللّٰهِ رَبًّا وَّ بِالْإِسْلاَمِ دِيْنًا، وَ بِمُحَمَّدٍ نَبِيًّا وَ رَسُوْلاً۔

**"ರದೀತು ಬಿಲ್ಲಾಹಿ ರಬ್ಬನ್ ವ ಬಿಲ್ ಇಸ್ಲಾಮಿ ದೀನನ್, ವಬಿ ಮುಹಮ್ಮದಿನ್ನಬಿಯ್ಯನ್ ವ ರಸೂಲನ್" (ಮೂರು ಸಲ)**

26. ನಾನು ಅಲ್ಲಾಹನನ್ನು ನನ್ನ ಪ್ರಭು, ಇಸ್ಲಾಮನ್ನು ನನ್ನ ಧರ್ಮ ಮತ್ತು ಮುಹಮ್ಮದ್‌ರನ್ನು(ಸ) ಪ್ರವಾದಿಯನ್ನಾಗಿಯೂ ಸಂದೇಶವಾಹಕರನ್ನಾಗಿಯೂ ನಂಬಿದೆ ಹಾಗೂ ಅದರಲ್ಲಿ ಸಂತುಷ್ಟನಾಗಿರುವೆ.[19]

---

ಸಮಯ (ಅಸ್‌ಬಹ್‌ನಾ ಇದರ ಬದಲು) ಅಮ್‌ಸೈನಾ ಎಂಬ ಈ ದುವಾ ಪಠಿಸಿದನೋ ಆತ ತನ್ನ ರಾತ್ರಿಯ ಕೃತಜ್ಞತೆ ಸಲ್ಲಿಸಿದ.

**[ವರದಿ- ಹ. ಅಬ್ದುಲ್ಲ ಬಿನ್ ಘನಾಮ್(ರ) ಅಬೂದಾವೂದ್, ನಸಾಈ, ಇಬ್ನುಹಿಬ್ಬಾನ್]**

18. ಹ. ಅಬ್ದುಲ್ಲ ಬಿನ್ ಉಮರ್‌ರಿಂದ ವರದಿಯಾಗಿದೆ. ಪ್ರವಾದಿ(ಸ) ಅವರಿಗೆ ಹೇಳಿದರು, ಒಂದು ದಿನ ದಾಸನೊಬ್ಬ ದಾಸ್ಯಾರಾಧನೆಯಲ್ಲಿ ಹೇಳಿದ "ಯಾರಬ್ಬೀ ಲಕಲ್ ಹಮ್ದು ಕಮಾ ಯಂಬಗೀ ಲಿಜಲಾಲಿ ವಜ್‌ಹಿಕ..." ಈ ಪ್ರಾರ್ಥನೆಯನ್ನು ಆಲಿಸಿದ ಇಬ್ಬರು ದೇವಚರರು ಆಶ್ಚರ್ಯಚಕಿತರಾದರು ಮತ್ತು ಅದನ್ನು ಹೇಗೆ ದಾಖಲಿಸಿಕೊಳ್ಳಬೇಕೆಂದು ತಿಳಿಯದೆ, ಇಬ್ಬರೂ ಆಕಾಶಕ್ಕೆ ಹೋಗಿ ಹೇಳಿದರು- "ಓ ಅಲ್ಲಾಹ್, ನಿನ್ನೋರ್ವ ದಾಸನು ಹೇಳಿದ ದುವಾವನ್ನು ಹೇಗೆ ದಾಖಲಿಸಿಕೊಳ್ಳಲೆಂದು ತಿಳಿಯುತ್ತಿಲ್ಲ. ಆ ದಾಸನು ಏನು ಹೇಳಿರುವನೆಂದು ಅಲ್ಲಾಹನೇ ಚೆನ್ನಾಗಿ ಬಲ್ಲನು. ಅಲ್ಲಾಹ್ ಹೇಳಿದ- ನನ್ನ ದಾಸ ಏನು ಹೇಳಿದ? ದೇವಚರರು ಹೇಳಿದರು, "ಯಾರಬ್ಬಿ ಲಕಲ್ ಹಮ್‌ದು..." ಅಲ್ಲಾಹನು ದೇವಚರರಿಗೆ ಆಜ್ಞಾಪಿಸಿದ- ನನ್ನ ದಾಸನು ಹೇಳಿದಂತೆ ಬರೆದಿಟ್ಟುಕೊಳ್ಳಿರಿ. ಅವನು ನನ್ನ ಬಳಿಗೆ ಬಂದಾಗ ಅದರ ಪ್ರತಿಫಲ ಆತನಿಗೆ ನಾನೇ ಕೊಡುವೆನು.

19. ಪ್ರವಾದಿಯವರ(ಸ) ಸೇವಕ ಅಬೂಸಲಾಮ್‌ರಿಂದ(ರ) ವರದಿಯಾಗಿದೆ. ಪ್ರವಾದಿ(ಸ) ಈ ರೀತಿ ಹೇಳಿರುವುದನ್ನು ಕೇಳಿದ್ದೇನೆ. 'ಯಾರು ಇದನ್ನು ಸಂಜೆ ಮುಂಜಾನೆ ಪಠಿಸುತ್ತಾನೋ ಆತನಿಂದ ಸಂತುಷ್ಟನಾಗುವುದು ಅಲ್ಲಾಹನ ಮೇಲೆ ಹಕ್ಕಾಗಿರುತ್ತದೆ.'

**(ಅಬೂದಾವೂದ್, ತಿರ್ಮಿದಿ, ನಸಾಈ, ಹಾಕಿಮ್)**

سُبْحَانَ اللّٰهِ وَ بِحَمْدِهٖ، عَدَدَ خَلْقِهٖ وَرِضَا نَفْسِهٖ، وَزِنَةَ عَرْشِهٖ، وَ مِدَادَ كَلِمَاتِهٖ۔

**"ಸುಬ್ಹಾನಲ್ಲಾಹಿ ವಬಿಹಮ್ದಿಹಿ, ಅದದ ಖಲ್ಕಿಹೀ ವರಿದಾ ನಫ್ಸಿಹೀ, ವಝಿನತ ಅರ್ಷಿಹೀ, ವಮಿದಾದ ಕಲಿಮಾತಿಹಿ" (ಮೂರು ಸಲ)**

27. ಅಲ್ಲಾಹನ ಸೃಷ್ಟಿಗಳ ಸಂಖ್ಯೆಯಷ್ಟು, ಆತನ ಸಂಪ್ರೀತಿ ಗಳಿಸುವಷ್ಟು, ಆತನ ವಿಶ್ವ ಸಿಂಹಾಸನದ ಘನತೆಯಷ್ಟು ಮತ್ತು ಆತನ ಮನೋಹರ ವಚನಗಳನ್ನು ಬರೆಯಲು ಅಗತ್ಯವಿರುವ ಶಾಯಿಯಷ್ಟು ಆತನ ಸ್ತುತಿಸ್ತೋತ್ರಗಳನ್ನು ಜಪಿಸುತ್ತೇನೆ.[20]

بِسْمِ اللّٰهِ الَّذِىْ لاَ يَضُرُّ مَعَ اِسْمِهٖ شَىْءٌ فِى الْاَرْضِ وَلاَ فِى السَّمَآءِ وَ هُوَ السَّمِيْعُ الْعَلِيْمُ۔

**"ಬಿಸ್ಮಿಲ್ಲಾಹಿಲ್ಲದೀ ಲಾಯದುರ್ರು ಮಅ ಇಸ್ಮಿಹಿ ಶೈಉನ್ ಫಿಲ್ ಅರ್ದಿ ವಲಾ ಫಿಸ್ಸಮಾಇ ವಹುವಸ್ಸಮೀಉ ಉಲ್ ಅಲೀಮ್." (ಮೂರು ಸಲ)**

28. ಅಲ್ಲಾಹನ ನಾಮದಿಂದ, ಅದರ ಸಮೃದ್ಧಿಯಿಂದ ಭೂಮಿ ಮತ್ತು ಆಕಾಶದ ಯಾವುದೇ ವಸ್ತು ಹಾನಿಯನ್ನುಂಟು ಮಾಡದು. ಅವನು ಸರ್ವ ವೀಕ್ಷಕನೂ ಸರ್ವಜ್ಞನೂ ಆಗಿರುವನು.[21]

اَللّٰهُمَّ اِنَّا نَعُوْذُ بِكَ مِنْ اَنْ نُشْرِكَ بِكَ شَيْئًا نَعْلَمُهٗ، وَ نَسْتَغْفِرُكَ لِمَا لاَ نَعْلَمُهٗ۔

---

20. ಉಮ್ಮುಲ್ ಮೂಮಿನೀನ್ ಹ. ಜುವೈರಿಯಾರಿಂದ(ರ) ವರದಿಯಾಗಿದೆ. ಅವರಲ್ಲಿಂದ ಪ್ರವಾದಿ(ಸ) ಫಜ್ರ್ ನಮಾಝ್‌ಗೆ ಹೋದರು. ಆಗ ಅವರು ತನ್ನ ನಮಾಝಿನ ಸ್ಥಳದಲ್ಲಿ ಕೂತಿದ್ದರು. ಪ್ರವಾದಿ(ಸ) ಸೂರ್ಯೋದಯದ ಬಳಿಕ ಮರಳಿದಾಗಲೂ ಆಕೆ ಅಲ್ಲೇ ಕುಳಿತಿದ್ದರು. ಪ್ರವಾದಿ(ಸ) ಕೇಳಿದರು, 'ನಾನು ನಿಮ್ಮನ್ನು ಬಿಟ್ಟು ಹೋದ ಸ್ಥಿತಿಯಲ್ಲೇ ಈಗಲೂ ಕೂತಿದ್ದೀರಾ? ಅವರು(ರ) ಹೌದೆಂದರು. ಆಗ ಪ್ರವಾದಿ(ಸ) ಹೇಳಿದರು 'ನಾನು ನಿಮ್ಮಲ್ಲಿಂದ ಹೋದ ಬಳಿಕ ನಾಲ್ಕು ವಚನಗಳನ್ನು ಮೂರು ಮೂರು ಸಲ ಪಠಿಸಿದ್ದೆ. ಅದು ನಿಮ್ಮ ಆ ಎಲ್ಲ ದಿಕ್ರ್‌ಗಳಿಗಿಂತ ಅಧಿಕ ತೂಕವುಳ್ಳದ್ದಾಗಿದೆ. (ಮುಸ್ಲಿಮ್)

21. ಉಸ್ಮಾನ್ ಬಿನ್ ಅಫ್ಫಾನ್‌ರಿಂದ ವರದಿ: ಪ್ರವಾದಿ(ಸ) ಹೇಳಿದ್ದಾರೆ- ದಾಸನು ದಿನಂಪ್ರತಿ ಸಂಜೆ ಮುಂಜಾನೆ ಇದನ್ನು ಮೂರು ಸಲ ಪಠಿಸಿದರೆ ಆತನಿಗೆ ಯಾವ ವಸ್ತುವಿನಿಂದಲೂ ನಷ್ಟವಾಗಲಾರದು. [ವರದಿ- ಉಸ್ಮಾನ್ ಬಿನ್ ಅಫ್ಫಾನ್, ಅಬೂದಾವೂದ್, ತಿರ್ಮಿದಿ]

"ಅಲ್ಲಾಹುಮ್ಮ ಇನ್ನಾ ನಊದುಬಿಕ ಮಿನ್ ಅನ್‌ನುಶ್ರಿಕ ಬಿಕ ಶೈಅನ್ ನಅ್‌ಲಮುಹು, ವ ನಸ್‌ತಗ್‌ಫಿರುಕ ಲಿಮಾ ಲಾ ನಅ್‌ಲಮುಹು." (ಮೂರು ಸಲ)

29. ಓ ಅಲ್ಲಾಹನೇ, ನಾವು ತಿಳಿದಿರುತ್ತಾ ಯಾರನ್ನಾದರೂ ನಿನ್ನ ಭಾಗೀದಾರರನ್ನಾಗಿ ಮಾಡಿರುವುದರಿಂದ ನಿನ್ನ ಅಭಯ ಯಾಚಿಸುತ್ತೇವೆ ಮತ್ತು ಅಜ್ಞಾನದಿಂದಾಗಿ ನಮ್ಮಿಂದ ನಿನ್ನೊಂದಿಗೆ ಸಹಭಾಗಿಗೊಳಿಸಿದ ಅಪರಾಧವೆಸಗಿದ್ದರೆ ಅದರಿಂದ ನಿನ್ನಿಂದಲೇ ಕ್ಷಮೆ ಯಾಚಿಸುತ್ತೇವೆ.[22]

اَعُوْذُ بِكَلِمَاتِ اللّٰهِ التَّآمَّاتِ مِنْ شَرِّ مَا خَلَقَ۔

"ಅಊದು ಬಿಕಲಿಮಾತಿಲ್ಲಾಹಿತ್ತಾಮ್ಮಾತಿ ಮಿನ್ ಶರ್‍ರೀ ಮಾ ಖಲಕ್" (ಮೂರು ಸಲ)

30. ನಾನು ಅಲ್ಲಾಹನ ಸಮಗ್ರ ವಚನಗಳ ಮೂಲಕ ಆತನು ಸೃಷ್ಟಿಸಿರುವುದೆಲ್ಲದರ ಕೇಡಿನಿಂದ ಆತನ ಅಭಯ ಯಾಚಿಸುತ್ತೇನೆ.[23]

اَللّٰهُمَّ اِنِّىْ اَعُوْذُ بِكَ مِنَ الْهَمِّ وَالْحَزَنِ وَ اَعُوْذُ بِكَ مِنَ الْعَجْزِ وَالْكَسَلِ، وَاَعُوْذُ بِكَ مِنَ الْجُبْنِ وَالْبُخْلِ وَ اَعُوْذُ بِكَ مِنْ غَلَبَةِ الدَّيْنِ وَ قَهْرِ الرِّجَالِ۔

"ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನಲ್ ಹಮ್ಮಿ ವಲ್ ಹಝುನಿ ವ ಅಊದು ಬಿಕ ಮಿನಲ್ ಅಜ್‌ಝಿ ವಲ್ ಕಸಲಿ, ವ ಅಊದುಬಿಕ ಮಿನಲ್ ಜುಬ್ನಿ ವಲ್ ಬುಖ್‌ಲಿ ವ ಅಊದುಬಿಕ ಮಿನ್ ಗಲಬತಿದ್ದೈನಿ ವ ಖಹ್ರಿರ್‍ರಿಜಾಲಿ." (ಮೂರು ಸಲ)

---

22. ಹ.ಅಬೂ ಮೂಸಾ ಅಶ್‌ಅರಿಯವರಿಂದ(ರ) ವರದಿಯಾಗಿದೆ. ಒಂದು ದಿನ ಪ್ರವಾದಿಯವರು(ಸ) ನಮ್ಮನ್ನು ಅಭಿಸಂಬೋಧಿಸುತ್ತಾ ಹೇಳಿದರು, "ಓ ಜನರೇ, ಬಹುದೇವಾರಾಧನೆ (ಶಿರ್ಕ್)ಯಿಂದ ಪಾರಾಗಿರಿ. ಅದು ಇರುವೆಯ ಹೆಜ್ಜೆಯ ಸಪ್ಪಳಕ್ಕಿಂತಲೂ ಅಧಿಕ ನಿಶ್ಶಬ್ದವಾಗಿ ಪ್ರವೇಶಿಸುತ್ತದೆ." ಸಭಿಕರಲ್ಲೊಬ್ಬರು ಕೇಳಿದರು "ಓ ಸಂದೇಶವಾಹಕರೇ, ಅದು ಇರುವೆಯ ಹೆಜ್ಜೆಯ ಸಪ್ಪಳಕ್ಕಿಂತಲೂ ಅಧಿಕ ಸೂಕ್ಷ್ಮವಾಗಿದ್ದರೆ ನಾವು ಅದರಿಂದ ರಕ್ಷೆ ಪಡೆಯುವುದು ಹೇಗೆ?" ಅವರು(ಸ) ಹೇಳಿದರು- ಈ ದುವಾ ಪಠಿಸಿರಿ (ಅಹ್ಮದ್-ತಬ್ರಾನಿ)

23. ಪ್ರವಾದಿ(ಸ) ಹೇಳಿದ್ದಾರೆ "ಸಂಜೆಯ ವೇಳೆ ಇದನ್ನು ಪಠಿಸಲಿ, ಆತನಿಗೆ ಆ ರಾತ್ರಿ ಯಾವುದೇ ವಿಷ ಅಥವಾ ಕಡಿತವು ನಷ್ಟವನ್ನುಂಟು ಮಾಡಲಾರದು.

[ವರದಿ- ಅಬೂಹುರೈರಾ, ಇಬ್ನು ಹಿಬ್ಬಾನ್]

31. ಓ. ಅಲ್ಲಾಹನೇ, ದುಃಖ ದುಮ್ಮಾನ, ಅಸಹಾಯಕತೆ, ಆಲಸ್ಯ ಹೇಡಿತನ, ಲೋಭ, ಸಾಲದ ಹೊರೆ ಮತ್ತು ಜನರ ಕ್ರೋಧದಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.[24]

اَللّٰهُمَّ عَافِنِىْ فِىْ بَدَنِىْ، اَللّٰهُمَّ عَافِنِىْ فِىْ سَمْعِىْ، اَللّٰهُمَّ عَافِنِىْ فِىْ بَصَرِىْ، اَللّٰهُمَّ اِنِّىْ اَعُوْذُبِكَ مِنَ الْكُفْرِ وَالْفَقْرِ، اَللّٰهُمَّ اِنِّىْ اَعُوْذُبِكَ مِنْ عَذَابِ الْقَبْرِ لَآ اِلٰهَ اِلَّآ اَنْتَ۔

"ಅಲ್ಲಾಹುಮ್ಮ ಆಫಿನೀ ಫಿ ಬದನೀ, ಅಲ್ಲಾಹುಮ್ಮ ಆಫಿನೀ ಫೀ ಸಮ್‌ಈ, ಅಲ್ಲಾಹುಮ್ಮ ಆಫಿನೀ ಫೀ ಬಸರೀ, ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನಲ್ ಕುಫ್ರಿ ವಲ್ ಫಖ್‌ರಿ, ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನ್ ಅದಾಬಿಲ್ ಕಬ್ರಿ ಲಾ ಇಲಾಹ ಇಲ್ಲಾ ಅಂತ." (ಮೂರು ಸಲ)

32. ಓ ಅಲ್ಲಾಹನೇ, ನೀನು ನನಗೆ ದೈಹಿಕ ಆರೋಗ್ಯ ದಯಪಾಲಿಸು, ನನ್ನ ಶ್ರವಣ ಮತ್ತು ದೃಷ್ಟಿಯನ್ನು ಸುರಕ್ಷಿತವಾಗಿರಿಸು. ಓ ಅಲ್ಲಾಹನೇ ಕೃತಘ್ನತೆ, ದಾರಿದ್ರ್ಯ ಮತ್ತು ಗೋರಿಯ ಶಿಕ್ಷೆಯಿಂದ ನಿನ್ನ ಅಭಯ ಯಾಚಿಸುತ್ತೇನೆ. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ.[25]

---

24. ಹ. ಅಬೂ ಸಈದ್ ಖುದ್ರಿ(ರ) ವರದಿ ಮಾಡಿದ್ದಾರೆ. "ಒಂದು ದಿನ ಪ್ರವಾದಿ(ಸ) ಮಸೀದಿಗೆ ಆಗಮಿಸಿದರು. ಆಗ ಅಲ್ಲಿ ಅನ್ಸಾರಿಗಳಲ್ಲೋರ್ವರಾದ ಅಬೂ ಉಮಾಮ(ರ) ಕುಳಿತಿದ್ದರು. ಅವರು(ಸ) ಕೇಳಿದರು- ಅಬೂ ಉಮಾಮ ಏನಾಯಿತು? ನೀವು ನಮಾಝಿನ ಸಮಯಗಳ ಹೊರತಾಗಿಯೂ ಮಸೀದಿಯಲ್ಲಿ ಕುಳಿತಿರುವುದನ್ನು ನೋಡುತ್ತಿದ್ದೇನೆ. ಅವರು(ರ) ಉತ್ತರಿಸಿದರು "ಓ ಅಲ್ಲಾಹನ ಸಂದೇಶವಾಹಕರೇ, ಸಮಸ್ಯೆಗಳು ಆವರಿಸಿಕೊಂಡಿವೆ, ಸಾಲದ ಹೊರೆಯಿಂದ ಬಿಗಿಯಲ್ಪಟ್ಟಿದ್ದೇನೆ. ಅವರು(ಸ) ಹೇಳಿದರು" ನಾನು ನಿಮಗೆ ಕೆಲವು ವಚನಗಳನ್ನು ಕಲಿಸಿಕೊಡುತ್ತೇನೆ. ನೀವದನ್ನು ಪಠಿಸಿದರೆ ಅಲ್ಲಾಹನು ನಿಮ್ಮ ಸಮಸ್ಯೆಗಳನ್ನು ದೂರೀಕರಿಸುವನು ಮತ್ತು ನಿಮ್ಮನ್ನು ಸಾಲಮುಕ್ತಗೊಳಿಸುವನು. ಅವರು(ರ) ನಿವೇದಿಸಿದರು- 'ಖಂಡಿತವಾಗಿಯೂ ಕಲಿಸಿಕೊಡಿರಿ.' ಪ್ರವಾದಿ(ಸ) ಹೇಳಿದರು: ಪ್ರಭಾತದಲ್ಲಿ ಅಥವಾ ಸಂಜೆ ನೀವು ಈ ದುವಾ ಮಾಡಿರಿ. ಅಬೂಉಮಾಮ ಹೇಳುತ್ತಾರೆ 'ನಾನು ಈ ದುವಾ ಪಠಿಸಿದೆ. ಅಲ್ಲಾಹನು ನನ್ನ ಸಮಸ್ಯೆಗಳನ್ನು ದೂರೀಕರಿಸಿದ ಮತ್ತು ಸಾಲಬಾಧೆಯಿಂದ ಮುಕ್ತಗೊಳಿಸಿದ. (ಅಬೂದಾವೂದ್)

25. ಹ. ಅಬ್ದುರ್ರಹ್‌ಮಾನ್ ಅಬೂಬಕರ್‌ರಿಂದ(ರ) ವರದಿಯಾಗಿದೆ. ಅವರು ತಮ್ಮ ತಂದೆಯವರಲ್ಲಿ ನಿವೇದಿಸಿದರು "ಅಪ್ಪಾ, ತಾವು ಪ್ರತಿದಿನ ಈ ದುವಾವನ್ನು ಬೆಳಗ್ಗೆ ಮೂರು ಸಲ, ಸಂಜೆ ಮೂರು ಸಲ ಹೇಳುವುದನ್ನು ಆಲಿಸಿದ್ದೇನೆ. ಅವರು(ರ) ಉತ್ತರಿಸಿದರು. ಪ್ರವಾದಿ(ಸ) ಈ ದುವಾವನ್ನು ಇದೇ ರೀತಿ ಪಠಿಸುತ್ತಿರುವುದನ್ನು ನಾನು ಆಲಿಸಿದ್ದೇನೆ. ನಾನು ಅದನ್ನೇ ಅನುಸರಿಸ ಬಯಸುತ್ತೇನೆ.

اَللّٰهُمَّ اَنْتَ رَبِّىْ لَآ اِلٰـهَ اِلَّا اَنْتَ، خَلَقْتَنِىْ وَ اَنَا عَبْدُكَ وَ اَنَا
عَلٰى عَهْدِكَ وَوَعْدِكَ مَا اسْتَطَعْتُ، اَعُوْذُبِكَ مِنْ شَرِّ
مَا صَنَعْتُ، اَبُوْءُ لَكَ بِنِعْمَتِكَ عَلَيَّ وَ اَبُوْءُ بِذَنْبِىْ فَاغْفِرْ لِىْ
فَاِنَّهُ لاَ يَغْفِرُ الذُّنُوْبَ اِلَّآ اَنْتَ۔

"ಅಲ್ಲಾಹುಮ್ಮ ಅಂತ ರಬ್ಬೀ ಲಾ ಇಲಾಹ ಇಲ್ಲಾ ಅಂತ, ಖಲಕ್ತನೀ ವಅನ ಅಬ್ದುಕ ವಅನ ಅಲಾ ಅಹ್‌ದಿಕ ವವಲ್‌ದಿಕ ಮಸ್ತತಲ್‌ತು, ಅಊದುಬಿಕ ಮಿನ್ ಶರ್ರಿ ಮಾ ಸನಲ್‌ತು, ಅಬೂಉ ಲಕ ಬಿನಿಲ್‌ಮತಿಕ ಅಲಯ್ಯ ವ ಅಬೂಉ ಬಿದಂಬೀ ಫಗ್‌ಫಿರ್ಲೀ ಫಇನ್ನಹು ಲಾಯಗ್‌ಫಿರುದ್ದುನೂಬ ಇಲ್ಲಾ ಅಂತ"

33. ಓ ಅಲ್ಲಾಹ್! ನೀನೇ ನನ್ನ ಪಾಲಕ ಪ್ರಭು. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನೇ ನನ್ನನ್ನು ಸೃಷ್ಟಿಸಿದೆ. ನಾನು ನಿನ್ನ ದಾಸ. ನಾನು ನಿನ್ನಲ್ಲಿ ಮಾಡಿರುವ ದಾಸ್ಯ-ಆರಾಧನೆಯ ಮತ್ತು ಅನುಸರಣೆಯ ಕರಾರನ್ನು ನನಗೆ ಸಾಧ್ಯವಿದ್ದಷ್ಟು ಪಾಲಿಸುವೆನು. ನನ್ನಿಂದ ಆಗಿ.ಹೋದ ಪ್ರಮಾದಗಳ ದುಷ್ಪರಿಣಾಮಗಳಿಂದ ನಿನ್ನ ಅಭಯ ಯಾಚಿಸುತ್ತೇನೆ. ನೀನು ನನಗೆ ಕೊಡಮಾಡಿದ ಅನುಗ್ರಹಗಳನ್ನು ಒಪ್ಪುತ್ತೇನೆ. ನನ್ನ ಪಾಪಗಳನ್ನು ಒಪ್ಪಿಕೊಳ್ಳುತ್ತೇನೆ. ಆದ್ದರಿಂದ ನನ್ನ ಪಾಪಗಳನ್ನು ಮನ್ನಿಸು. ನಿನ್ನ ಹೊರತು ನನ್ನ ಪಾಪಗಳನ್ನು ಮನ್ನಿಸುವವರು ಯಾರೂ ಇಲ್ಲ.[26]

اَسْتَغْفِرُ اللّٰهَ الَّذِىْ لاَ اِلٰـهَ اِلَّا هُوَ الْحَىُّ الْقَيُّوْمُ وَ اَتُوْبُ اِلَيْهِ۔

"ಅಸ್ತಗ್‌ಫಿರುಲ್ಲಾಹಲ್ಲದೀ ಲಾ ಇಲಾಹ ಇಲ್ಲಾ ಹುವಲ್ ಹಯ್ಯುಲ್ ಕಯ್ಯೂಮು ವ ಅತೂಬು ಇಲೈಹಿ."

ಅಲ್ಲಾಹನಲ್ಲದೇ ಅನ್ಯ ಆರಾಧ್ಯರಿಲ್ಲ, ಆತನಿಂದಲೇ ಕ್ಷಮೆ ಯಾಚಿಸುತ್ತೇನೆ. ಅವನು ಸ್ವಯಂ ಜೀವಂತನೂ ಚಿರಂತನನೂ ಆಗಿರುತ್ತಾನೆ. ಅವನ ಕಡೆಗೇ ನಾನು ಮರಳುತ್ತೇನೆ.

اَللّٰهُمَّ صَلِّ عَلٰى سَيِّدِنَا مُحَمَّدٍ وَّ عَلٰى آلِ سَيِّدِنَا مُحَمَّدٍ
كَمَا صَلَّيْتَ عَلٰى سَيِّدِنَا اِبْرَاهِيْمَ وَ عَلٰى آلِ سَيِّدِنَا اِبْرَاهِيْمَ

26. ಹ. ಶದ್ದಾದ್ ಬಿನ್ ಔಸ್(ರ) ವರದಿ ಮಾಡಿದ್ದಾರೆ. ಈ ಪ್ರಾರ್ಥನೆಯು 'ಸೈಯದುಲ್ ಇಸ್ತಿಗ್‌ಫಾರ್' ಅರ್ಥಾತ್ ಕ್ಷಮೆ ಯಾಚನೆಯ ಸಮಗ್ರ ದುವಾ ಆಗಿದೆ. ಯಾರಾದರೂ ಈ ದುವಾವನ್ನು ಪೂರ್ಣ ದೃಢತೆಯೊಂದಿಗೆ ಸಂಜೆಯ ಹೊತ್ತು ಪಠಿಸಿದರೆ ಅದೇ ರಾತ್ರಿ ಆತ ಮರಣ ಹೊಂದಿದರೆ ಸ್ವರ್ಗವನ್ನು ಪ್ರವೇಶಿಸುವನು. ಈ ದುವಾವನ್ನು ಪೂರ್ಣ ದೃಢತೆಯೊಂದಿಗೆ ಬೆಳಗ್ಗಿನ ವೇಳೆ ಪಠಿಸಿ ಅದೇ ದಿನ ಮರಣ ಹೊಂದಿದರೆ ಸ್ವರ್ಗವನ್ನು ಪ್ರವೇಶಿಸುವನು. (ಬುಖಾರಿ)

وَ بَارِكْ عَلٰى سَيِّدِنَا مُحَمَّدٍ وَّ عَلٰى آلِ سَيِّدِنَا مُحَمَّدٍ كَمَا بَارَكْتَ عَلٰى سَيِّدِنَا اِبْرَاهِيْمَ وَ عَلٰى آلِ سَيِّدِنَا اِبْرَاهِيْمَ فِى الْعَالَمِيْنَ – اِنَّكَ حَمِيْدٌ مَّجِيْدٌ.

"ಅಲ್ಲಾಹುಮ್ಮ ಸಲ್ಲಿ ಅಲಾ ಸಯ್ಯಿದಿನಾ ಮುಹಮ್ಮದಿನ್ ವಅಲಾ ಆಲಿ ಸಯ್ಯಿದಿನಾ ಮುಹಮ್ಮದಿನ್ ಕಮಾ ಸಲ್ಲೈತ ಅಲಾ ಸಯ್ಯಿದಿನಾ ಇಬ್ರಾಹೀಮ ವಅಲಾ ಆಲಿ ಸಯ್ಯಿದಿನಾ ಇಬ್ರಾಹೀಮ ವ ಬಾರಿಕ್ ಅಲಾ ಸಯ್ಯಿದಿನಾ ಮುಹಮ್ಮದಿನ್ ವಅಲಾ ಆಲಿ ಸಯ್ಯಿದಿನಾ ಮುಹಮ್ಮದಿನ್ ಕಮಾ ಬಾರಕ್‌ತ ಅಲಾ ಸಯ್ಯಿದಿನಾ ಇಬ್ರಾಹೀಮ ವ ಅಲಾ ಆಲಿ ಸಯ್ಯಿದಿನಾ ಇಬ್ರಾಹೀಮ ಫಿಲ್ ಆಲಮೀನ- ಇನ್ನಕ ಹಮಿಂದುಮ್ಮಜೀದ್." (ಮೂರು ಸಲ)

34. ಓ ಅಲ್ಲಾಹ್! ನಮ್ಮ ನಾಯಕ ಮುಹಮ್ಮದ್(ಸ) ಮತ್ತು ಮತ್ತವರ ಸಂತತಿಗಳ ಮೇಲೆ ಅನುಗ್ರಹ ಸುರಿಸು. ನೀನು ನಮ್ಮ ಸರದಾರ ಇಬ್ರಾಹೀಮ್(ಅ) ಮತ್ತು ಅವರ ಸಂತತಿಗಳ ಮೇಲೆ ನಿನ್ನ ಅನುಗ್ರಹ ವರ್ಷಿಸಿದಂತೆ ನಮ್ಮ ನಾಯಕ ಮುಹಮ್ಮದ್(ಸ) ಮತ್ತವರ ಸಂತತಿಗಳ ಮೇಲೆ ಸಮೃದ್ಧಿ ಪ್ರದಾನ ಮಾಡು, ನಮ್ಮ ಸರದಾರ ಇಬ್ರಾಹೀಮ್(ಅ) ಮತ್ತು ಮತ್ತವರ ಸಂತತಿಯ ಮೇಲೆ ಸಮೃದ್ಧಿ ಪ್ರದಾನ ಮಾಡಿದಂತೆ. ಖಂಡಿತವಾಗಿಯೂ ನೀನು ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುವಿ.[27]

لَآ اِلٰهَ اِلَّا اللّٰهُ وَحْدَهٗ لَا شَرِيْكَ لَهٗ، لَهُ الْمُلْكُ وَلَهُ الْحَمْدُ، وَ هُوَ عَلٰى كُلِّ شَيْءٍ قَدِيْرٌ.

"ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕಲಹೂ, ಲಹುಲ್ ಮುಲ್ಕು ವಲಹುಲ್ ಹಮ್ದು, ವಹುವ ಅಲಾ ಕುಲ್ಲಿ ಶೈಇನ್ ಕದೀರ್." (ಹತ್ತು ಸಲ)

35. ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಏಕೈಕನು. ಅವನಿಗಾರೂ ಸಹಭಾಗಿಗಳಿಲ್ಲ. ಪ್ರಭುತ್ವ ಮತ್ತು ಪ್ರಶಂಸೆಗಳು ಆತನಿಗೇ ಮೀಸಲು. ಅವನು ಸಕಲ ವಿಷಯಗಳ ಸಾಮರ್ಥ್ಯವುಳ್ಳವನು.

سُبْحَانَ اللّٰهِ، وَالْحَمْدُ لِلّٰهِ، وَلَآ اِلٰهَ اِلَّا اللّٰهُ، وَاللّٰهُ اَكْبَرُ.

"ಸುಬ್ಹಾನಲ್ಲಾಹಿ, ವಲ್ ಹಮ್ದುಲಿಲ್ಲಾಹಿ, ವಲಾ ಇಲಾಹ ಇಲ್ಲಲ್ಲಾಹು, ವಲ್ಲಾಹು ಅಕ್ಬರ್." (ನೂರು ಸಲ)

---

27. ಹ. ಅಬೂ ದರ್ದಾರಿಂದ(ರ) ವರದಿಯಾಗಿದೆ. ಪ್ರವಾದಿ(ಸ) ಹೇಳಿದರು- ಯಾರು ಸಂಜೆ ಮುಂಜಾನೆ ತಲಾ ಹತ್ತು ಸಲ ನನ್ನ ಮೇಲೆ ಸ್ವಸ್ತಿ ವಚನ (ದರೂದ್) ಹೇಳುತ್ತಾರೋ ಅವರಿಗೆ ಪರಲೋಕದಲ್ಲಿ ನನ್ನ ಶಿಫಾರಸು ಲಭಿಸುವುದು. (ತಬ್ರಾನಿ)

36. ಅಲ್ಲಾಹನು ಪರಮ ಪಾವನನು. ಸರ್ವಸ್ತುತಿಸ್ತೋತ್ರಗಳೂ ಆತನಿಗಾಗಿವೆ. ಅಲ್ಲಾಹನಲ್ಲದೇ ಅನ್ಯ ಆರಾಧ್ಯರಿಲ್ಲ ಮತ್ತು ಅಲ್ಲಾಹನೇ ಸರ್ವಶ್ರೇಷ್ಠನು.

سُبْحَانَکَ اَللّٰهُمَّ وَ بِحَمْدِکَ، اَشْهَدُ اَنْ لاَ اِلٰهَ اِلَّا اَنْتَ
اَسْتَغْفِرُکَ وَ اَتُوْبُ اِلَیْکَ۔

"ಸುಬ್ಹಾನಕ ಅಲ್ಲಾಹುಮ್ಮ ವಬಿಹಮ್ದಿಕ, ಅಶ್‌ಹದು ಅಲ್ಲಾ ಇಲಾಹ ಇಲ್ಲಾ ಅಂತ ಅಸ್ತಗ್‌ಫಿರುಕ ವ ಅತೂಬು ಇಲೈಕ." (ಮೂರು ಸಲ)

37. ಪರಮ ಪಾವನನಾದ ಅಲ್ಲಾಹನೇ, ಸಕಲ ಸ್ತುತಿಸ್ತೋತ್ರಗಳೂ ನಿನಗೆ. ನೀನಲ್ಲದೇ ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ನಾನು ನಿನ್ನಲ್ಲಿ ಕ್ಷಮೆ ಯಾಚಿಸುತ್ತೇನೆ ಮತ್ತು ನಿನ್ನ ಕಡೆಗೆ ಪಶ್ಚಾತ್ತಾಪಪಟ್ಟು ಮರಳುತ್ತೇನೆ.

اَللّٰهُمَّ صَلِّ عَلٰى سَیِّدِنَا مُحَمَّدٍ عَبْدِکَ وَ نَبِیِّکَ وَ رَسُوْلِکَ
النَّبِیِّ الْاُمِّیِّ وَ عَلٰى اٰلِهٖ وَ صَحْبِهٖ وَ سَلِّمْ تَسْلِیْمًا عَدَدَ مَا
اَحَاطَ بِهٖ عِلْمُکَ، وَ خَطَّ بِهٖ قَلَمُکَ وَ اَحْصَاهُ کِتَابُکَ،
وَ ارْضَ اَللّٰهُمَّ عَنْ سَادَاتِنَا اَبِیْ بَکْرٍ وَ عُمَرَ وَ عُثْمَانَ وَ
عَلِیٍّ، وَ عَنِ الصَّحَابَةِ اَجْمَعِیْنَ، وَ عَنِ التَّابِعِیْنَ وَ تَابِعِیْهِمْ
بِاِحْسَانٍ اِلٰى یَوْمِ الدِّیْنِ۔

"ಅಲ್ಲಾಹುಮ್ಮ ಸಲ್ಲಿ ಅಲಾ ಸಯ್ಯಿದಿನಾ ಮುಹಮ್ಮದಿನ್ ಅಬ್ದಿಕ ವ ನಬಿಯ್ಯಿಕ ವರಸೂಲಿಕನ್ನಬಿಯ್ಯಿಲ್ ಉಮ್ಮಿಯ್ಯಿ ವ ಅಲಾ ಆಲಿಹೀ ವಸಹ್‌ಬಿಹೀ ವಸಲ್ಲಿಮ ತಸ್ಲೀಮನ್ ಅದದ ಮಾ ಅಹಾತ ಬಿಹೀ ಇಲ್ಮುಕ, ವಖತ್ತ ಬಿಹೀ ಕಲಮುಕ ವ ಅಹ್‌ಸಾಹು ಕಿತಾಬುಕ, ವರ್‌ದ ಅಲ್ಲಾಹುಮ್ಮ ಅನ್ ಸಾದಾತಿನಾ ಅಬೀ ಬಕ್‌ರಿನ್ ವ ಉಮರ ವ ಉಸ್ಮಾನ ವ ಅಲಿಯ್ಯಿನ್, ವ ಅನಿಸ್ಸಹಾಬತಿ ಅಜ್ಮಈನ, ವ ಅನಿತ್ತಾಬಿಈನ ವತಾಬಿಈ ಹಿಮ್ ಬಿಇಹ್‌ಸಾನಿನ್ ಇಲಾ ಯೌಮಿದ್ದೀನ್."

38. ಓ ಅಲ್ಲಾಹ್! ನಮ್ಮ ನಾಯಕರೂ ನಿನ್ನ ದಾಸರೂ ಪ್ರವಾದಿಯೂ ನಿರಕ್ಷರಿಯಾದ ಸಂದೇಶವಾಹಕರೂ ಹಾಗೂ ಅವರ ಸಂತಾನ ಮತ್ತು ಸಂಗಾತಿಗಳ ಮೇಲೆ ನಿನ್ನ ಜ್ಞಾನದಲ್ಲಿರುವಷ್ಟು ಗರಿಷ್ಠ ಅನುಗ್ರಹಗಳನ್ನು ದಯಪಾಲಿಸು. ನಿನ್ನ ಲೇಖನಿಯಿಂದ ಮಾತ್ರ ಅದನ್ನು ದಾಖಲಿಸಲ್ಪಡಲು ಸಾಧ್ಯ. ನಿನ್ನ ಗ್ರಂಥಕ್ಕೆ ಮಾತ್ರ ಅದನ್ನು ಎಣಿಸಲು ಸಾಧ್ಯ. ಓ ಅಲ್ಲಾಹ್! ನಮ್ಮ ಮುಂದಾಳುಗಳಾದ ಹ. ಅಬೂಬಕರ್, ಉಮರ್, ಉಸ್ಮಾನ್, ಅಲಿ ಮತ್ತು ಎಲ್ಲ ಪ್ರವಾದಿ ಸಂಗಾತಿಗಳೂ ಅವರ ಹಿಂಗಾಮಿಗಳೂ, ಅವರ

ಹೆಜ್ಜೆ ಗುರುತುಗಳನ್ನು ಅನುಸರಿಸುವ ಅಂತ್ಯ ದಿನದ ವರೆಗಿನ ಎಲ್ಲರಿಂದಲೂ ನೀನು ಸಂತುಷ್ಟನಾಗು.

سُبْحَانَ رَبِّكَ رَبِّ الْعِزَّةِ عَمَّا يَصِفُوْنَ، وَ سَلاَمٌ عَلَى الْمُرْسَلِيْنَ، وَالْحَمْدُ لِلّٰهِ رَبِّ الْعٰلَمِيْنَ۔

"ಸುಬ್ಹಾನ ರಬ್ಬಿಕ ರಬ್ಬಿಲ್ ಇಝ್ಝತಿ ಅಮ್ಮಾ ಯಸಿಫೂನ್, ವಸಲಾಮುನ್ ಅಲಲ್ ಮುರ್‌ಸಲೀನ, ವಲ್ ಹಮ್ದುಲಿಲ್ಲಾಹಿ ರಬ್ಬಿಲ್ ಆಲಮೀನ್"

39. ಜನರಾಡುತ್ತಿರುವ ಸಕಲ ವಿಷಯಗಳಿಂದ ನಿನ್ನ ಪಾಲಕ ಪ್ರಭು, ಗೌರವಾನ್ವಿತ ಒಡೆಯನು ಪರಮ ಪಾವನನು. ಸರ್ವ ಪ್ರವಾದಿಗಳ ಮೇಲೆ ಶಾಂತಿ ಇರಲಿ ಮತ್ತು ಸರ್ವ ಪ್ರಶಂಸೆಗಳೂ ಸರ್ವಲೋಕ ಪಾಲಕನಿಗೆ ಮೀಸಲು.[28]

## ಸಂಕ್ಷಿಪ್ತ ದುಆ

ಯಾರಾದರೊಬ್ಬ ಸಹೋದರನಿಗೆ ಸಮಯದ ಅಭಾವದಿಂದಾಗಿ ಅಥವಾ ಯಾವುದಾದರೊಂದು ದಿನ ವೈಯಕ್ತಿಕ ಕಾರಣದಿಂದಾಗಿ ಅವನು ಅಥವಾ ಅವನ ಸಂಗಾತಿ ಖಿನ್ನತೆಗೊಳಪಟ್ಟರೆ ಪ್ರಾರ್ಥನೆಯನ್ನು ಈ ರೀತಿ ಸಂಕ್ಷಿಪ್ತಗೊಳಿಸಬಹುದು. ಮೊತ್ತ ಮೊದಲು ಅವೂದು ಬಿಲ್ಲಾಹ್ ಪಠಿಸಿ, ಬಳಿಕ ಸೂರ ಅಲ್ ಫಾತಿಹಾ, ಆಯತುಲ್ ಕುರ್ಸಿ, ಸೂರ ಅಲ್ ಬಕರಃದ ಕೊನೆಯ ಸೂಕ್ತ, ಮೂರು ಸಲ ಸೂರ ಇಖ್ಲಾಸ್, ಸೂರಃ ಮುಅವ್ವಿದತೈನ್, ತರುವಾಯ ಪ್ರಥಮ ದುವಾ "ಅಸ್ತಗ್‌ಫಿರುಲ್ಲಾಹಲ್ಲದೀ ಲಾ ಇಲಾಹ ಇಲ್ಲಾಹುವಲ್ ಹಯ್ಯುಲ್ ಕಯ್ಯೂಮು ವ ಅತೂಬು ಇಲ್ಲೈಹಿ..." ತನಕ ದುವಾಗಳನ್ನು ಪಠಿಸಿರಿ. "ಸುಬ್ಹಾನಕ ಅಲ್ಲಾಹುಮ್ಮ ವಬಿಹಮ್ದಿಕ...." ತನಕ ಮುಂದುವರಿದು ಕೊನೆಯ ದುವಾದೊಂದಿಗೆ ಪೂರ್ಣಗೊಳಿಸಿರಿ.

---

28. ಇಮಾಮ್ ನವವಿ ಅಲ್ ಅದ್‌ಕಾರ್‌ನಲ್ಲಿ ಹೇಳುತ್ತಾರೆ- ಹ. ಅಲೀಯುವರಿಂದ(ರ) ಉಲ್ಲೇಖಿತ. ಯಾರು ಪೂರ್ಣ ಪ್ರತಿಫಲ ಬಯಸುತ್ತಾರೋ ಅವರು ಸಭೆಯ ಅಂತ್ಯದಲ್ಲಿ "ಸುಬ್ಹಾನ ರಬ್ಬಿಕ ರಬ್ಬಿಲ್ ಇಝ್ಝತಿ..." ಇದನ್ನು ಹೇಳಲಿ.

# ದೈನಂದಿನ ಕುರ್‌ಆನ್ ಪಠಣ

## ಕುರ್‌ಆನಿನ ಮಹತ್ವ

ಪವಿತ್ರ ಕುರ್‌ಆನ್ ಇಸ್ಲಾಮೀ ಆದೇಶ ನಿರ್ದೇಶಗಳ ಪರಿಪೂರ್ಣ ಸಂವಿಧಾನ ವಾಗಿದೆ. ಇದು ಸತ್ಯವಿಶ್ವಾಸಿಗಳ ಪಾಲಿಗೆ ಸದಾ ಒಳಿತು ಮತ್ತು ಯುಕ್ತಿಯ ಚಿಲುಮೆಯೊಡೆ ಯುತ್ತಿರುವ ಉಗಮಸ್ಥಾನವಾಗಿದೆ. ಇದು ಅಲ್ಲಾಹನ ಸಾಮೀಪ್ಯ ಗಳಿಸುವ ಅತ್ಯುತ್ತಮ ಮಾಧ್ಯಮವಾಗಿದೆ.

ಹ. ಅಬ್ದುಲ್ಲ ಬಿನ್ ಮಸ್‌ವೂದ್‌ರಿಂದ(ರ) ವರದಿಯಾಗಿರುವ ಹದೀಸ್ ಒಂದರಲ್ಲಿ ಹೇಳಲಾಗಿದೆ.

"ಪವಿತ್ರ ಕುರ್‌ಆನ್ ಮಹಾ ಪ್ರಭುವಾದ ಅಲ್ಲಾಹನ ವತಿಯಿಂದ ಅನುಗ್ರಹ ನಿಧಿಯಾಗಿದೆ. ಅಲ್ಲಾಹನ ಅನುಗ್ರಹ ನಿಧಿಯಿಂದ ನಿಮ್ಮ ಸಾಮರ್ಥ್ಯಕ್ಕನುಸಾರ ನಿಮ್ಮ ಪಾಲು ಪಡೆಯಿರಿ. ನಿಸ್ಸಂದೇಹವಾಗಿಯೂ ಪವಿತ್ರ ಕುರ್‌ಆನ್ ಅಲ್ಲಾಹನ ಪಾಶವಾಗಿದೆ. ಇದು ಶುಭ್ರ ಪ್ರಕಾಶವೂ ಗುಣೌಷಧವೂ ಆಗಿದೆ. ಯಾರು ಇದನ್ನು ಬಿಗಿಯಾಗಿ ಹಿಡಿದನೋ ಅದು ಆತನ ಪಾಲಿಗೆ ಗುರಾಣಿಯಾಗುವುದು. ಅದರ ಅನುಸರಣೆ ಮೋಕ್ಷದ ಮಾರ್ಗವಾಗಿದೆ. ಅದರ ಆದೇಶ ನಿರ್ದೇಶಗಳನ್ನು ಪಾಲಿಸುವವನು ಎಂದೂ ನೇರಮಾರ್ಗದಿಂದ ವ್ಯತಿಚಲಿಸಲಾರ. ಅದನ್ನು ಪಾಲಿಸುವವನನ್ನು ಎಂದಿಗೂ ಸರಿಪಡಿಸುವ ಅಗತ್ಯವಿರಲಾರದು. ಏಕೆಂದರೆ ಆತ ವಕ್ರದಾರಿ ಹಿಡಿಯಲಾರನು. ಅದರ ಬಗ್ಗೆ ಆಳವಾಗಿ ಚಿಂತನ ಮಂಥನ ನಡೆಸಿದರೆ ಅದಕ್ಕಿಂತಲೂ ಮಿಗಿಲಾಗಿ ಅಂತ್ಯವಿಲ್ಲದ ವಿಸ್ಮಯಕಾರಿ ವಿಷಯಗಳು ಪ್ರಕಟವಾಗುತ್ತಾ ಇರುತ್ತದೆ. ಹೆಚ್ಚೆಚ್ಚು ಪಠಣದ ಹೊರತಾಗಿಯೂ ಅದರ ಹೊಸತನ (ನವೀನತೆ) ಸೊರಗಿ ಹಳೆಯದಾಗದು. ಅದರ ಪಠಣ ನಡೆಸುತ್ತಾ ಇರಿ, ಅಲ್ಲಾಹನ ನಿಧಿಯಿಂದ ಪ್ರತಿಯೊಂದು ಪದಕ್ಕೆ ಹತ್ತುಪಟ್ಟು ಪ್ರತಿಫಲ ಲಭಿಸುತ್ತದೆ. ಅಲಿಫ್ ಲಾಮ್ ಮೀಮ್ ಒಂದೇ ಅಕ್ಷರವೆಂದು ನಾನು ಹೇಳುವುದಿಲ್ಲ, ಬದಲಾಗಿ ಅಲಿಫ್, ಲಾಮ್, ಮೀಮ್ ಮೂರು ಬೇರೆ ಬೇರೆ ಪದಗಳಾಗಿವೆ."

ಹ. ಅಬೂದರ್ರ್ ಗಿಫ್ಫಾರಿಯವರಿಗೆ(ರ) ಉಪದೇಶಿಸುತ್ತಾ ಪ್ರವಾದಿಯವರು(ಸ) ಹೇಳಿದರು, "ಕುರ್‌ಆನಿನ ಅಧ್ಯಯನವನ್ನು ನಿಮ್ಮ ಪಾಲಿಗೆ ಕಡ್ಡಾಯಗೊಳಿಸಿರಿ. ಏಕೆಂದರೆ ಭೂಮಿಯಲ್ಲಿ

ನಿಮಗೆ ಅದರಿಂದ ಪ್ರಕಾಶ ದೊರೆಯಲಿದೆ ಮತ್ತು ಪರಲೋಕದಲ್ಲಿ ನಿಮ್ಮ ಪಾಲಿಗೆ ಬುತ್ತಿಯಾಗಲಿದೆ." (ಇಬ್ನು ಹಿಬ್ಬಾನ್)

ಉಮ್ಮುಲ್ ಮೂಮಿನೀನ್ ಆಯಿಶಾ(ರ) ಹೇಳುತ್ತಾರೆ "ನಿರರ್ಗಳವಾಗಿ ಪವಿತ್ರ ಕುರ್‌ಆನ್ ಓದುವ ವ್ಯಕ್ತಿ ದೇವಾಜ್ಞೆಗಳನ್ನು ಪಾಲಿಸುವ ವಿಧೇಯ ದೇವಚರರೊಂದಿಗಿರುವನು. ಯಾರು ತಡೆದು ತಡೆದು ಬಹಳ ಕಷ್ಟದಿಂದ ಕುರ್‌ಆನ್ ಪಠಿಸಲು ಕಲಿಯುತ್ತಾನೋ ಆತನಿಗೆ ಇಮ್ಮಡಿ ಪ್ರತಿಫಲವಿದೆ." (ಬುಖಾರಿ, ಮುಸ್ಲಿಮ್)

ಅಂತ್ಯ ಪ್ರವಾದಿಯವರು(ಸ) ತಮ್ಮ ಸಂಗಾತಿಗಳಿಗೆ(ರ) ಕುರ್‌ಆನ್ ಪಠಿಸುವಂತೆ ಹುರಿದುಂಬಿಸುತ್ತಿದ್ದರು ಮತ್ತು ಕುರ್‌ಆನಿನೊಂದಿಗಿನ ಅವರ ಸಂಬಂಧದ ಆಧಾರದಲ್ಲಿ ಅವರ ಸ್ಥಾನಮಾನವನ್ನು ನಿರ್ಧರಿಸುತ್ತಿದ್ದರು. ಕುರ್‌ಆನ್ ಪಠಿಸಲು ಅಶಕ್ತರಾದವರು ಕೂಡಾ ದೇವಗ್ರಂಥದೊಂದಿಗಿನ ಆಧ್ಯಾತ್ಮಿಕ ಸಂಬಂಧ ಮತ್ತದರ ಅನುಗ್ರಹದಿಂದ ವಂಚಿತರಾಗದಿರಲೆಂದು ಕುರ್‌ಆನ್ ಆಲಿಸುವಂತೆ ಮತ್ತು ಗ್ರಹಿಸುವಂತೆ ಉಪದೇಶಿಸುತ್ತಿದ್ದರು.

ಹ. ಅಬೂಹುರ್ರೈರಾರಿಂದ(ರ) ವರದಿಯಾಗಿದೆ. ಪ್ರವಾದಿ(ಸ) ಹೇಳಿದರು, "ಯಾರು ಅಲ್ಲಾಹನ ಗ್ರಂಥದ ಒಂದು ಸೂಕ್ತವನ್ನಾದರೂ ಲಕ್ಷ್ಯವಿಟ್ಟು ಆಲಿಸಿದನೋ ಆತನಿಗೆ ಭಾರೀ ಪುಣ್ಯಗಳು ಬರೆಯಲ್ಪಟ್ಟವು. ಯಾರು ಒಂದು ಸೂಕ್ತವನ್ನಾದರೂ ಪಠಿಸಿದನೋ ಆತನಿಗೆ ಅದು ಕಿಯಾಮತ್‌ನಂದು ಪ್ರಕಾಶಮಯ ಜ್ಯೋತಿಯಾಗಿ ಮಾರ್ಪಡುವುದು. (ಅಹ್ಮದ್)

ಇನ್ನೊಂದು ಹದೀಸ್‌ನಲ್ಲಿ ಅಬೂಹುರ್ರೈರಾ(ರ) ವರದಿ ಮಾಡುತ್ತಾರೆ. ಒಂದು ಸಲ ಪ್ರವಾದಿಯವರು(ಸ) ಒಂದು ತಂಡವನ್ನು ಕಳುಹಿಸುತ್ತಾ ಅವರಲ್ಲಿ ಹೇಳಿದರು- ಪವಿತ್ರ ಕುರ್‌ಆನ್ ಯಾರಿಗೆ ಎಷ್ಟು ನೆನಪಿದೆಯೋ ಅದನ್ನು ಪಠಿಸಲಿ. ಎಲ್ಲರೂ ಕಂಠಪಾಠವಿದ್ದಷ್ಟು ಓದಿದರು. ಅತೀ ಕಿರಿಯ ಪ್ರಾಯದ ಯುವಕನೋರ್ವನಲ್ಲಿ ಪ್ರವಾದಿ(ಸ) ಕೇಳಿದರು, ನಿನಗೂ ಏನಾದರೂ ನೆನಪಿದೆಯಾ? ಆತ ಹೇಳಿದ, "ನನಗೆ ಇಂತಿಂತಹ ಭಾಗ ಮತ್ತು ಸೂರಃ ಅಲ್‌ಬಕರ ನೆನಪಿದೆ. ಪ್ರವಾದಿ(ಸ) ಆಶ್ಚರ್ಯಚಕಿತರಾಗಿ ಹೇಳಿದರು: ನಿನಗೆ ಸೂರಃ ಅಲ್ ಬಕರವೂ ಕಂಠಪಾಠವಿದೆಯಾ? ಆತ ಹೌದೆಂದನು. ಪ್ರವಾದಿ(ಸ) ಹೇಳಿದರು "ಹೋಗು, ನೀನು ಅವರ ಅಮೀರ್(ನಾಯಕ) ಆಗಿರುವಿ." (ತಿರ್ಮಿದಿ)

ಪವಿತ್ರ ಕುರ್‌ಆನಿನ ಅನುಗ್ರಹ ಮತ್ತದರ ಅಧ್ಯಯನದ ಪ್ರಯೋಜನಗಳನ್ನು ನಮ್ಮ ಪೂರ್ವಿಕರು ಚೆನ್ನಾಗಿ ಅರಿತಿದ್ದರು. ಇದೇ ಕಾರಣದಿಂದ ಅವರು ಪವಿತ್ರ ಕುರ್‌ಆನನ್ನು ನೀತಿ ಸಂಹಿತೆಯ ಉಗಮ ಸ್ಥಾನವನ್ನಾಗಿಸಿದ್ದರು. ಅದರಿಂದಲೇ ತಮ್ಮ ಆದೇಶಗಳನ್ನು ಆಯ್ದುಕೊಳ್ಳುತ್ತಿದ್ದರು. ಅವರು ಪವಿತ್ರ ಕುರ್‌ಆನಿನ ಪಠಣವನ್ನು ತಮ್ಮ ಹೃದಯದ ಅತ್ಯುತ್ತಮ ಭಾಗವನ್ನಾಗಿಸಿದರು. ಪವಿತ್ರ ಕುರ್‌ಆನ್ ಅವರ ದೈನಂದಿನ ಆರಾಧನೆಯಾಗಿತ್ತು. ಅವರು ಅದಕ್ಕಾಗಿ ತಮ್ಮನ್ನು ಮನಬಿಚ್ಚಿ ಅರ್ಪಿಸಿದ್ದರು. ಹೃದಯಾಂತರಾಳದಿಂದ ಅದರ ಮೇಲೆ ಚಿಂತನ-ಮಂಥನ ನಡೆಸಿದರು. ಅರ್ಥಾತ್ ಪವಿತ್ರ ಕುರ್‌ಆನ್ ಅವರ ಆತ್ಮದಲ್ಲಿ ಸೇರಿಬಿಟ್ಟಿತು. ಅದರ ಪರಿಣಾಮವಾಗಿ ಅಲ್ಲಾಹನು ಅವರಿಗೆ ಭೂಮಿಯಲ್ಲಿ

ಆಡಳಿತ ದಯಪಾಲಿಸಿದನು ಮತ್ತು ಪರಲೋಕದಲ್ಲಿ ಉನ್ನತ ಸ್ಥಾನಮಾನಗಳನ್ನು ಕಾಯ್ದಿರಿಸಿರುವನು. ಆದರೆ ನಾವು ಕುರ್‌ಆನನ್ನು ಕಡೆಗಣಿಸಿದ ಕಾರಣ ಇಹದಲ್ಲಿ ದುರ್ಬಲರಾದೆವು. ಇದರಿಂದ ನಮ್ಮ ಧರ್ಮವು ನಾಮಮಾತ್ರವಾಗಿ ಉಳಿಯಿತು.

ಹ. ಅನಸ್ ಬಿನ್ ಮಾಲಿಕ್(ರ) ಹೇಳುತ್ತಾರೆ: ಪ್ರವಾದಿ(ಸ) ಹೇಳಿದರು- ನನ್ನ ಮುಂದೆ ನನ್ನ ಸಮುದಾಯದ ಪುಣ್ಯ ಫಲಗಳನ್ನು ತೋರಿಸಲಾಯಿತು. ಮಸೀದಿಯ ಕಸಕಡ್ಡಿ ಶುಚಿಗೊಳಿಸುತ್ತಾ ಹೊರಗೆಸೆಯಲಾಗುವ ಒಂದು ಹುಲ್ಲು ಕಡ್ಡಿಯನ್ನೂ ಕಡೆಗಣಿಸ ಲಾಗಲಿಲ್ಲ. ಬಳಿಕ ನನಗೆ ನನ್ನ ಸಮುದಾಯದ ಪಾಪಗಳನ್ನು ತೋರಿಸಲಾಯಿತು. ಅದರಲ್ಲಿ ನನಗೆ, ಒಬ್ಬನು ಪವಿತ್ರ ಕುರ್‌ಆನಿನ ಅಧ್ಯಾಯ ಅಥವಾ ಸೂಕ್ತಗಳನ್ನು ಬಾಯಿಪಾಠ ಮಾಡಿ ಅದನ್ನು ಮರೆತು ಬಿಟ್ಟದ್ದಕ್ಕಿಂತ ದೊಡ್ಡ ಪಾಪ ಕಾಣಲಿಲ್ಲ.

**(ತಿರ್ಮಿದಿ, ಅಬೂದಾವೂದ್, ಇಬ್ನುಮಾಜಃ)**

ಇಸ್ಲಾಮೀ ಆಂದೋಲನವು ಪವಿತ್ರ ಕುರ್‌ಆನಿನ ಪಠಣ, ಅಧ್ಯಯನ ಮತ್ತದರ ಸ್ಮರಣೆಗೆ ಪ್ರಥಮ ಪ್ರಾಶಸ್ತ್ಯ ಕೊಟ್ಟು ವಿಶೇಷ ವ್ಯವಸ್ಥೆ ಮಾಡಿದೆ. ಪ್ರತಿದಿನ ಜಮಾಅತ್ ಬಂಧುಗಳು ಪವಿತ್ರ ಕುರ್‌ಆನಿನ ಕನಿಷ್ಠ ಅರ್ಧ ಪಾರಾದ ಪಾರಾಯಣವನ್ನಾದರೂ ಮಾಡಬೇಕು.

## ಪಾರಾಯಣದ ಪ್ರಮಾಣ

ಪ್ರತಿಯೊಬ್ಬರ ಸ್ಥಿತಿಗತಿಗಳು ವಿಭಿನ್ನವಾಗಿರುತ್ತದೆ. ಅದಕ್ಕಾಗಿ ಪಾರಾಯಣದ ಪ್ರಮಾಣವನ್ನು ನಿರ್ಣಯಿಸಲಾಗಿಲ್ಲ. ಪ್ರತಿಯೋರ್ವನೂ ತನ್ನ ಸ್ಥಿತಿಗತಿ ಮತ್ತು ಸಾಮರ್ಥ್ಯ ಕ್ಕನುಸಾರವಾಗಿ ಅದನ್ನು ನಿರ್ಣಯಿಸುವನು. ಆದರೆ ಪವಿತ್ರ ಕುರ್‌ಆನಿನ ಪಾರಾಯಣ ಮಾಡದೆ ಯಾರೊಬ್ಬರ ದಿನವೂ ಕಳೆಯಬಾರದೆಂದು ಅದಕ್ಕೆ ಪ್ರಾಮುಖ್ಯತೆಯನ್ನು ಕೊಡಲಾಗಿದೆ. ನಮ್ಮ ಮುಂಗಾಮಿಗಳು (ಸಲಫ್) ಪವಿತ್ರ ಕುರ್‌ಆನಿನ ಪಾರಾಯಣದ ವಿಷಯದಲ್ಲಿ ನಡೆದು ಬಂದ ಪರಂಪರೆಯ ಕಾರ್ಯವಿಧಾನದ ಸ್ವರೂಪ ಹೇಗಿತ್ತೆಂಬುದನ್ನು ಹೇಳ ಬಯಸುತ್ತೇವೆ.

1) ಪವಿತ್ರ ಕುರ್‌ಆನಿನ ಪಾರಾಯಣದ ಕನಿಷ್ಠ ಅವಧಿ ಮೂರು ದಿವಸ. ಮೂರು ದಿವಸಕ್ಕಿಂತ ಕಡಿಮೆ ಸಮಯದಲ್ಲಿ ಅಥವಾ ಒಂದು ತಿಂಗಳಿಗಿಂತ ಅಧಿಕ ಸಮಯದಲ್ಲಿ ಪೂರ್ಣಗೊಳಿಸುವುದನ್ನು ಸಲಫುಸ್ಸಾಲಿಹೀನ್(ಮುಂಗಾಮಿಗಳು) ಇಷ್ಟಪಡುತ್ತಿರಲಿಲ್ಲ. ಮೂರು ದಿವಸಗಳಿಗಿಂತ ಕಡಿಮೆ ಅವಧಿಯಲ್ಲಿ ಪವಿತ್ರ ಕುರ್‌ಆನಿನ ಬಗ್ಗೆ ಚಿಂತನ-ಮಂಥನ ನಡೆಸಲು ಮತ್ತು ಆಲೋಚಿಸಲು ಸಾಧ್ಯವಿಲ್ಲವೆಂದು ಅವರು ಹೇಳುತ್ತಿದ್ದರು. ಪವಿತ್ರ ಕುರ್‌ಆನ್ ಎಲ್ಲಿಯವರೆಗೆ ಓದಲಾಗಿದೆಯೋ ಅದರ ನೆನಪಿಗಾಗಿ ತುಂಬಾ ಸಮಯ ವ್ಯಯಿಸುತ್ತಿದ್ದುದ ರಿಂದಲೇ ಅವರು ಒಂದು ತಿಂಗಳಿಗಿಂತ ಅಧಿಕ ಸಮಯದಲ್ಲಿ ಪೂರ್ಣಗೊಳಿಸುತ್ತಿದ್ದರು.

ಹ. ಅಬ್ದುಲ್ಲ ಬಿನ್ ಅಮ್ರ್ ಬಿನ್ ಆಸ್‌ರಿಂದ(ರ) ವರದಿಯಾಗಿದೆ. ಅಲ್ಲಾಹನ ಸಂದೇಶವಾಹಕರು(ಸ) ಹೇಳಿದರು, ಯಾರು ಮೂರು ದಿವಸಗಳಿಗಿಂತ ಕಡಿಮೆ ಅವಧಿಯಲ್ಲಿ ಕುರ್‌ಆನ್ ಪೂರ್ಣಗೊಳಿಸಿದನೋ ಅವನು ಖಂಡಿತವಾಗಿಯೂ ಕುರ್‌ಆನನ್ನು ಅರಿಯಲಿಲ್ಲ.

(ತಿರ್ಮಿದಿ, ಅಬೂದಾವೂದ್, ಇಬ್ನುಮಾಜಃ)

2) ಈ ನಿಟ್ಟಿನಲ್ಲಿ ಸಾಧ್ಯವಾಗುವುದಾದರೆ ಮಧ್ಯಮ ಮಿತಿಯಲ್ಲಿ ಒಂದು ವಾರದಲ್ಲಿ ಪವಿತ್ರ ಕುರ್‌ಆನ್ ಪೂರ್ಣಗೊಳಿಸಬೇಕು.

ಪ್ರವಾದಿಯವರು(ಸ), ಹ. ಅಬ್ದುಲ್ಲ ಬಿನ್ ಅಮ್ರ್ ಬಿನ್ ಆಸ್‌ರಿಗೆ(ರ) ವಾರದಲ್ಲೊಮ್ಮೆ ಪವಿತ್ರ ಕುರ್‌ಆನ್ ಪೂರ್ಣಗೊಳಿಸಲು ಆದೇಶಿಸಿದ್ದರು. ಹ. ಉಸ್ಮಾನ್, ಝೈದ್ ಬಿನ್ ಸಾಬಿತ್, ಅಬ್ದುಲ್ಲಾ ಬಿನ್ ಮಸ್‌ವೂದ್ ಮತ್ತು ಉಬೈ ಬಿನ್ ಕಅಬ್(ರ) ಮುಂತಾದವರ ಒಂದು ತಂಡವು ಇದನ್ನೇ ರೂಢಿಯಾಗಿರಿಸಿತ್ತು.

ಹ. ಉಸ್ಮಾನ್‌ರವರು(ರ) ಶುಕ್ರವಾರ ದಿವಸ ಪವಿತ್ರ ಕುರ್‌ಆನ್ ಪಠಿಸಲು ಆರಂಭಿಸುತ್ತಿದ್ದರು. ಪ್ರತಿದಿನ ಒಂದು ಮಂಝಿಲ್ ಪೂರ್ತಿಗೊಳಿಸುತ್ತಿದ್ದರು. (ಮೊದಲ ದಿನ ಸೂರಃ ಅಲ್ ಬಕರದಿಂದ ಅಲ್ ಮಾಇದ, ಶನಿವಾರ- ಸೂರಃ ಅನ್‌ಆಮ್‌ನಿಂದ ಹೂದ್, ಆದಿತ್ಯವಾರ- ಸೂರಃ ಯೂಸುಫ್‌ನಿಂದ ಮರ್ಯಮ್, ಸೋಮವಾರ- ಸೂರ ತಾಹಾದಿಂದ ಕಸಸ್, ಮಂಗಳವಾರ- ಸೂರಃ ಅಂಕಬೂತ್‌ನಿಂದ ಸ್ವಾದ್, ಬುಧವಾರ- ಸೂರಃ ಅಝ್ಝುಮರ್‌ನಿಂದ ಅರ್ರಹ್ಮಾನ್ ಮತ್ತು ಗುರುವಾರ ಕೊನೆಯ ತನಕ) ಈ ರೀತಿ ಅವರು ಕುರ್‌ಆನ್ ಪಾರಾಯಣ ಪೂರ್ಣಗೊಳಿಸುತ್ತಿದ್ದರು.

ಹ. ಅಬ್ದುಲ್ಲ ಬಿನ್ ಮಸ್‌ವೂದ್‌ರವರ(ರ) ದಿನಚರಿಯೂ ಇದೇ ಆಗಿತ್ತು. ಆದರೆ ಅಧ್ಯಾಯಗಳು ಹಿಂದೆ ಮುಂದಾಗಿರಬಹುದು. ಅವರು ಸಹ ವಾರದಲ್ಲೊಮ್ಮೆ ಪೂರ್ತಿ ಗೊಳಿಸುತ್ತಿದ್ದರು.

ಇಲ್ಲಿ ಯಾವುದೇ ನಿರ್ದಿಷ್ಟ ವಿಂಗಡನೆ ಅಸಾಧ್ಯ. ಇದಂತೂ ಶ್ರೇಷ್ಠ ಮತ್ತು ಮುಂಗಾಮಿಗಳ ಅನುಸರಣೆಯಾಗಿದೆ. ಪ್ರತಿಯೋರ್ವ ಕಾರ್ಯಕರ್ತರು ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಪವಿತ್ರ ಕುರ್‌ಆನಿನ ಪಾರಾಯಣವನ್ನು ತನ್ನ ದಿನಚರಿಯನ್ನಾಗಿಸಬೇಕು. ಅದಕ್ಕೆ ಬಿಡುವಿರಬಾರದು. ಸ್ವತಃ ಪಠಿಸಲು ಅಶಕ್ತರಾಗಿದ್ದರೆ ಆಲಿಸುವಂತಹ ಪ್ರಯತ್ನ ಮಾಡಬೇಕು ಅಥವಾ ಕೆಲವು ಅಧ್ಯಾಯಗಳನ್ನು ಕಂಠಪಾಠ ಮಾಡಿ ಸಮಯ ಸಿಕ್ಕಾಗಲೆಲ್ಲ ಪಠಿಸಬೇಕು.

## ಹೆಚ್ಚೆಚ್ಚು ಪಠಿಸಬೇಕಾದ ಅಧ್ಯಾಯಗಳು

ಸೂರಃ ಯಾಸೀನ್, ಸೂರಃ ಅದ್ದುಖಾನ್, ಸೂರಃ ಅಲ್‌ವಾಕಿಅಃ ಮತ್ತು ಸೂರ ಮುಲ್ಕ್‌ಗಳ ಪಾರಾಯಣವನ್ನು ಕಾರ್ಯಕರ್ತರು ತಮ್ಮ ದೈನಂದಿನ ರೂಢಿಯನ್ನಾಗಿಸಬೇಕು. ಶುಕ್ರವಾರ ರಾತ್ರಿ ಮತ್ತು ಶುಕ್ರವಾರದ ಹಗಲು ಈ ಸೂರಃಗಳನ್ನು ಓದಲೇಬೇಕು. ಜೊತೆಗೆ

ಸೂರಃ ಅಲ್ ಕಹ್ಫ್ ಮತ್ತು ಸೂರಃ ಆಲಿ ಇಮ್ರಾನ್‌ಗಳನ್ನೂ ಸೇರಿಸಿ ಪಠಿಸಬೇಕು. ಈ ಕುರಿತು ನಮಗೆ ಪ್ರವಾದಿ ವಚನಗಳು ಮಾರ್ಗದರ್ಶನ ಮಾಡುತ್ತದೆ.

1) ಹ. ಮಅ್‌ಖಿಲ್ ಬಿನ್ ಯಸಾರ್‌ರ(ರ) ವರದಿ: ಪ್ರವಾದಿ(ಸ) ಹೇಳಿದರು- ಸೂರಃ ಯಾಸೀನ್ ಕುರ್‌ಆನಿನ ಹೃದಯವಾಗಿದೆ. ಯಾವ ವ್ಯಕ್ತಿ ಕೇವಲ ದೇವ ಸಂಪ್ರೀತಿ ಮತ್ತು ಪರಲೋಕವನ್ನಾಕಾಂಕ್ಷಿಸಿ ಅದನ್ನು ಪಠಿಸುತ್ತಾನೋ ಅಲ್ಲಾಹನು ಆತನನ್ನು ಕ್ಷಮಿಸುತ್ತಾನೆ. ಅದನ್ನು ನಿಮ್ಮ ಮರಣಗೊಳ್ಳುವವರ ಮೇಲೂ ಪಠಿಸಿರಿ.

**(ಅಹ್ಮದ್, ಅಬೂದಾವೂದ್, ನಸಾಈ)**

2) ಹ. ಅಬ್ದುಲ್ಲಾ ಬಿನ್ ಮಸ್‌ವೂದ್‌ರ(ರ) ವರದಿ ಹೀಗಿದೆ: "ಯಾರು ಪ್ರತಿ ರಾತ್ರಿ ಸೂರಃ ಅಲ್ ಮುಲ್ಕ್ ಪಠಿಸುವುದನ್ನು ತನ್ನ ರೂಢಿಯಾಗಿಸಿದನೋ, ಅಲ್ಲಾಹನು ಆ ಕಾರಣದಿಂದಾಗಿ ಆತನನ್ನು ಗೋರಿಯ ಯಾತನೆಯಿಂದ ಕಾಪಾಡುವನು." ನಾವು ಪ್ರವಾದಿಯವರ(ಸ) ಕಾಲದಲ್ಲಿ ಸೂರಃ ಅಲ್ ಮುಲ್ಕನ್ನು ಅಲ್ ಮಾನಿಅ್(ಗೋರಿಯಾತನೆಯ ಗುರಾಣಿ) ಎಂದು ಕರೆಯುತ್ತಿದ್ದೆವು. ದೇವಗ್ರಂಥದ ಈ ಅಧ್ಯಾಯವನ್ನು ಯಾರು ರಾತ್ರಿ ಪಠಿಸಿದನೋ ಆತ ಅಗಣಿತ ಅನುಗ್ರಹ ಮತ್ತು ಪ್ರತಿಫಲಗಳನ್ನು ಗಳಿಸಿದನು.

**(ನಸಾಈ, ಹಾಕಿಮ್)**

3) ಹ. ಅಬೂ ಹುರೈರಾ(ರ) ವರದಿಯೊಂದರಲ್ಲಿ ಈ ರೀತಿ ತಿಳಿಸಿದ್ದಾರೆ. ಯಾರು ರಾತ್ರಿ ವೇಳೆ ಸೂರ ಅದ್ದುಖಾನ್ ಪಠಿಸಿದನೋ, ಎಪ್ಪತ್ತು ಸಾವಿರ ದೇವಚರರು ಆತನಿಗಾಗಿ ಕ್ಷಮೆ ಯಾಚಿಸುವ ಸ್ಥಿತಿಯಲ್ಲಿ ಆತನ ಬೆಳಗಾಗುವುದು.

4) ಹ. ಅಬೂ ಸಈದ್ ಖುದ್ರಿ(ರ) ವರದಿ ಮಾಡಿದ್ದಾರೆ: ಪ್ರವಾದಿ(ಸ) ಹೇಳಿದರು. ಯಾರು ಶುಕ್ರವಾರ ದಿವಸ ಸೂರಃ ಅಲ್‌ಕಹ್ಫ್ ಪಠಿಸಿದನೋ ಎರಡು ಶುಕ್ರವಾರಗಳ ಮಧ್ಯೆ ಆತನಿಗಾಗಿ ಒಂದು ವಿಶೇಷ ಪ್ರಕಾಶವನ್ನು ಬೆಳಗಿಸಲಾಗುವುದು. **(ನಸಾಈ)**

5) ಅಬ್ದುಲ್ಲಾ ಬಿನ್ ಅಬ್ಬಾಸ್‌ರ(ರ) ಹದೀಸ್: ಪ್ರವಾದಿ(ಸ) ಹೇಳಿದರು- ಯಾರು ಶುಕ್ರವಾರದಂದು ಸೂರಃ ಆಲಿ ಇಮ್ರಾನ್ ಪಠಿಸಿದನೋ ಅಲ್ಲಾಹನು ಸೂರ್ಯಾಸ್ತಮಾನದ ವರೆಗೆ ಅವನ ಮೇಲೆ ತನ್ನ ಅನುಗ್ರಹವನ್ನು ಇಳಿಸುತ್ತಿರುವನು ಮತ್ತು ದೇವಚರರು ಅನುಗ್ರಹಕ್ಕಾಗಿ ಪ್ರಾರ್ಥಿಸುತ್ತಿರುವರು. **(ತಬ್ರಾನಿ)**

ಇದೇ ರೀತಿ ಸೂರಃ ಅಲ್ ವಾಕಿಯಃದ ಮಹತ್ವದ ಕುರಿತು ಹ. ಅಬ್ದುಲ್ಲ ಬಿನ್ ಮಸ್‌ವೂದ್‌ರವರಿಂದ(ರ) ಕೆಲವು ಹದೀಸ್‌ಗಳು ಸಿಗುತ್ತವೆ. ಏಕೆಂದರೆ ಈ ಅಧ್ಯಾಯದಲ್ಲಿ ಶಿಕ್ಷೆ-ರಕ್ಷೆ ಮತ್ತು ಪುನರುತ್ಥಾನ ದಿನದ ವಿಚಾರಣೆಯ ಚಿತ್ರಣವನ್ನು ಸವಿಸ್ತಾರವಾಗಿ ವಿವರಿಸಲಾಗಿದೆ. ಅವುಗಳಿಗೆ ಸಂಬಂಧಿಸಿದ ಎಲ್ಲ ಸಂದೇಹಗಳನ್ನು ನಿವಾರಿಸಲಾಗಿದೆ. ಆದುದರಿಂದ ಯಾವ ಮುಸ್ಲಿಮನು (ಆಜ್ಞಾನುಸಾರಿ) ಈ ಅಧ್ಯಾಯದ ಪಠಣದಿಂದ ವಂಚಿತನಾಗ ಬಾರದು. ದಿನಕ್ಕೊಂದು ಸಲ ಪಠಿಸಿರಿ. ಆದರೆ ರಾತ್ರಿ ಸಮಯ ಪಠಿಸುವುದಕ್ಕೆ ಉತ್ತಮವಾಗಿದೆ. ಶುಕ್ರವಾರದಂದು ಹಗಲು ಮತ್ತು ರಾತ್ರಿಯಲ್ಲೊಮ್ಮೆ ಒಂದು ಸಲ ಪಠಿಸುವುದು

ಅತ್ಯುತ್ತಮವಾಗಿದೆ. ಅಸರ್‌ನಿಂದ ಮಗ್ರಿಬ್ ತನಕದ ಸಮಯ ಸೂರಃ ಆಲಿ ಇಮ್ರಾನ್ ಪಠಿಸಲು ಕಾಯ್ದಿರಿಸಬೇಕು. ಇದು ಪ್ರಾರ್ಥನೆಯು ಸ್ವೀಕರಿಸಲ್ಪಡುವ ಸಮಯವಾಗಿದೆ. ಈ ಸಮೃದ್ಧ ಸಮಯದಲ್ಲಿ ಅಲ್ಲಾಹನ ಸ್ಮರಣೆಯ ಪ್ರತೀಕವಾದ ಪವಿತ್ರ ಕುರ್‌ಆನಿನ ಪಠಣದಲ್ಲಿ ತಲ್ಲೀನರಾಗಿರಬೇಕು.

## ಪಠಣದ ಶಿಷ್ಟಾಚಾರಗಳು

ಈ ಮೊದಲು ಸಾಧಾರಣ ರೀತಿಯ ಪಠಣದ ಶಿಷ್ಟಾಚಾರವನ್ನು ಹೇಳಲಾಗಿತ್ತು. ಇದೀಗ ವಿಶೇಷ ರೀತಿಯಲ್ಲಿ ಪಠಣದ ಶಿಷ್ಟಾಚಾರ ಹೇಳಬಯಸುತ್ತೇನೆ. ಪವಿತ್ರ ಕುರ್‌ಆನಿನ ಪಠಣದ ಪ್ರಮುಖ ಉದ್ದೇಶವು ಚಿಂತನ-ಮಂಥನವಾಗಿರಬೇಕು. ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಹೇಳುತ್ತಾನೆ.

كِتٰبٌ اَنْزَلْنٰهُ اِلَيْكَ مُبٰرَكٌ لِّيَدَّبَّرُوْٓا اٰيٰتِهٖ وَ لِيَتَذَكَّرَ اُولُوا
الْاَلْبَابِ۝

**"ಇದೊಂದು ಅತಿ ಸಮೃದ್ಧವಾದ ಗ್ರಂಥವಾಗಿದ್ದು ಇವರು ಇದರ ಸೂಕ್ತಗಳ ಕುರಿತು ಚಿಂತನೆ ನಡೆಸಲೆಂದು ಮತ್ತು ಬುದ್ಧಿಜೀವಿಗಳು ಇದರಿಂದ ಉಪದೇಶ ಪಡೆಯುವಂತಾಗ ಲೆಂದು ನಾವು ಇದನ್ನು ನಿಮಗೆ ಅವತೀರ್ಣಗೊಳಿಸಿದ್ದೇವೆ."**

**(ಪವಿತ್ರ ಕುರ್‌ಆನ್, 38:29)**

ಪವಿತ್ರ ಕುರ್‌ಆನಿನ ಪಠಣವು ಸರ್ವಲೋಕಗಳ ಪ್ರಭುವಿನೊಂದಿಗಿನ ಸಂಭಾಷಣೆ ಯಾಗಿರುವುದರಿಂದ ಅದನ್ನು ಅರಿಯುವುದು, ಚಿಂತನ-ಮಂಥನ ನಡೆಸುವುದು ಬಹಳ ಪ್ರಾಮುಖ್ಯವಾಗಿದೆಯೆಂದು ತಿಳಿದಿರಬೇಕು. ಕುರ್‌ಆನ್ ಪಠಿಸುವಾಗ ತಜ್ವೀದ್ ನಿಯಮಗಳ ಪರಿಗಣನೆಗೆ ಮಹತ್ವವಿರಲಿ ಮತ್ತು ಅಕ್ಷರ ಉಚ್ಚರಿಸುವಾಗ ಮಖ್‌ರಜ್‌ನ ಅರಿವಿರಲಿ. ಮದ್ದ್ ಇರುವಲ್ಲಿ ದೀರ್ಘಗೊಳಿಸಬೇಕು. ಗುನ್ನವನ್ನು ಪಾಲಿಸಬೇಕು. ಪೂರ್ಣವಾಗಿ ಉಚ್ಚರಿಸುವ ಮತ್ತು ಅಪೂರ್ಣವಾಗಿ ಉಚ್ಚರಿಸುವ ಅಕ್ಷರಗಳನ್ನು ತಿಳಿದಿರಬೇಕು.

ಹ. ಸಅದ್ ಬಿನ್ ಅಬೀ ವಕ್ಕಾಸ್(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಹೇಳಿದ್ದಾರೆ. ಪವಿತ್ರ ಕುರ್‌ಆನ್‌ನಲ್ಲಿ ಭಾವುಕತೆ ಇದೆ. ನೀವು ಅದನ್ನು ಪಠಿಸುವಾಗ ನಿಮ್ಮ ಮುಖ ಭಾವದಲ್ಲೂ ಅದು ಪ್ರಕಟವಾಗಬೇಕು. ದುಃಖ ಮತ್ತು ಭಯಾಶಂಕೆಯ ಅವಸ್ಥೆ ಯುಂಟಾಗಬೇಕು. ನಿಮ್ಮ ಕಣ್ಣಿನಿಂದ ಅಶ್ರುಧಾರೆ ಹರಿಯುತ್ತಿಲ್ಲವೆಂದಾದರೆ ಅಳುಮುಖ ವನ್ನಾದರೂ ಮಾಡಿಕೊಳ್ಳಿರಿ. ಪಠಿಸುವಾಗ ರಾಗದ ಬಗ್ಗೆಯೂ ಗಮನವಿರಲಿ. ಯಾರು ಸುಮಧುರವಾಗಿ ಪಠಿಸುವ ಪ್ರಯತ್ನ ಮಾಡುವುದಿಲ್ಲವೋ ಆತನಿಗೆ ನಮ್ಮೊಂದಿಗೆ ಯಾವ ಸಂಬಂಧವೂ ಇಲ್ಲ. **(ಇಬ್ನುಮಾಜಃ)**

ರಾಗದಲ್ಲಿ ಉತ್ಕೃಷ್ಟ ರೀತಿಯ ತಜ್ವೀದ್ ಮತ್ತು ಕಿರಾತ್‌ನ ತಾತ್ಪರ್ಯವಿದೆ. ಅದರೊಂದಿಗೆ ಭಯಭಕ್ತಿ ಮತ್ತು ದುಃಖದ ಸ್ಥಿತಿಯುಂಟಾಗಬೇಕಾಗಿದೆ.

ಹ. ಜಾಬಿರ್‌ರಿಂದ(ರ) ಉಲ್ಲೇಖಿತವಾಗಿದೆ. ಪ್ರವಾದಿ(ಸ) ಹೇಳಿದರು- ಕುರ್‌ಆನ್ ಪಠಿಸುವಾಗ ಆಲಿಸುವ ಜನರ ಹೃದಯದಲ್ಲಿ ದೇವಭಯವನ್ನುಂಟು ಮಾಡುವವನೇ ಸುಶ್ರಾವ್ಯವಾಗಿ ಕುರ್‌ಆನ್ ಪಠಿಸುವವರಲ್ಲಿ ಉತ್ತಮನು. (ಇಬ್ನುಮಾಜಃ)

## ಕುರ್‌ಆನ್ ಕೂಟಗಳು

ವಿವಿಧ ಸಂದರ್ಭಗಳಲ್ಲಿ ಕುರ್‌ಆನಿನ ಕಿರಾತ್ ಆಲಿಸುವಂತಹ ಕೂಟಗಳನ್ನು ಏರ್ಪಡಿಸಬೇಕು. ಅದನ್ನು ಇಖ್ವಾನುಲ್ ಮುಸ್ಲಿಮೂನ್‌ನ ಕುರ್‌ಆನಿನ ದೈನಂದಿನ ಪಠಣದಲ್ಲಿ ಒಳಪಡಿಸಲಾಗಿದೆ. ಯಾರು ಅಧಿಕ ಸುಶ್ರಾವ್ಯವಾಗಿ ಕುರ್‌ಆನ್ ಪಠಿಸಬಲ್ಲನೋ ಆತನಿಂದ ಪವಿತ್ರ ಕುರ್‌ಆನ್ ಆಲಿಸಬೇಕು. ಕಾರಿಯಾದವನು(ಪಠಿಸುವವನು) ಅತ್ಯುತ್ತಮ ರೀತಿಯಲ್ಲಿ ತಜ್ವೀದ್ ನಿಯಮವನ್ನು ಪಾಲಿಸುತ್ತಾ ಈ ಹಿಂದೆ ವಿವರಿಸಿದಂತಹ ಶಿಷ್ಟಾಚಾರ ಗಳೊಂದಿಗೆ ಕುರ್‌ಆನ್ ಪಠಿಸಬೇಕು. ಅದೇ ತರ ಆಲಿಸುವವರು ಸಹ ಕುರ್‌ಆನ್ ಪಠಿಸುತ್ತಿರುವಾಗ ಮೌನ ಪಾಲಿಸಬೇಕು. ಅದರ ಅರ್ಥದ ಬಗ್ಗೆ ಚಿಂತನ ಮಂಥನ ನಡೆಸಬೇಕು. ಉನ್ನತ ಮಟ್ಟದ ಭಯಭಕ್ತಿ, ಗೌರವವನ್ನು ಪ್ರದರ್ಶಿಸಬೇಕು. ಪ್ರತಿಕ್ಷಣವೂ ಈ ಸೂಕ್ತವನ್ನು ತನ್ನ ಮನಸ್ಸಿನಲ್ಲಿ ಅಚ್ಚಾಗಿರಿಸಲಿ.

وَ اِذَا قُرِئَ الْقُرْاٰنُ فَاسْتَمِعُوْا لَهٗ وَ اَنْصِتُوْا لَعَلَّكُمْ تُرْحَمُوْنَ۝

"ನಿಮ್ಮ ಮುಂದೆ ಕುರ್‌ಆನ್ ಓದಿದಾಗ ಲಕ್ಷ್ಯವಿಟ್ಟು ಕೇಳಿರಿ ಮತ್ತು ಮೌನವಾಗಿರಿ. ನೀವು ಅನುಗ್ರಹೀತರಾಗಬಹುದು" (ಪವಿತ್ರ ಕುರ್‌ಆನ್, 7:204)

ಸಹಾಬಿಗಳು(ರ) ಪವಿತ್ರ ಕುರ್‌ಆನನ್ನು ಆಲಿಸುವಾಗ ಅಲ್ಪವೂ ಅತ್ತ ಇತ್ತ ಅಲುಗಾಡುತ್ತಿರಲಿಲ್ಲ. ಅವರ ತಲೆಮೇಲೆ ಪಕ್ಷಿಗಳು ಕುಳಿತು ಕೊಂಡಂತೆ ಭಾಸವಾಗುತ್ತಿತ್ತು.

ಮಕ್ಕಾದ ಗಣ್ಯ ವ್ಯಕ್ತಿಗಳು ಪ್ರವಚನ ಅಥವಾ ಉಪದೇಶವನ್ನು ಬಯಸಿದಾಗಲೆಲ್ಲ ಅವರು ಇಮಾಮ್ ಶಾಫಿಈ(ರ) ಅವರ ಬಳಿಗೆ ಹೋಗುತ್ತಿದ್ದರು. ಅವರ ಸ್ವರ ಬಹಳ ಚೆನ್ನಾಗಿತ್ತು. ಅವರು ಸುಶ್ರಾವ್ಯವಾಗಿ ಕುರ್‌ಆನ್ ಪಠಿಸುತ್ತಿರುವಾಗ ಜನರು ಅಳುತ್ತಿರು ವುದನ್ನು ಕಾಣಬಹುದಾಗಿತ್ತು.

وَ اِذَا سَمِعُوْا مَآ اُنْزِلَ اِلَى الرَّسُوْلِ تَرٰۤى اَعْيُنَهُمْ تَفِيْضُ مِنَ
الدَّمْعِ مِمَّا عَرَفُوْا مِنَ الْحَقِّ

"ಅವರು ಸಂದೇಶವಾಹಕರ ಮೇಲೆ ಅವತೀರ್ಣಗೊಂಡ ಈ ವಾಣಿಯನ್ನು ಆಲಿಸುವಾಗ ಸತ್ಯಪ್ರಜ್ಞೆಯ ಪ್ರಭಾವದಿಂದ ಅವರ ನಯನಗಳು ಅಶ್ರುಗಳಿಂದ ಒದ್ದೆಯಾಗುತ್ತಿರುವುದನ್ನು ನೀವು ಕಾಣುತ್ತೀರಿ." (ಪವಿತ್ರ ಕುರ್‌ಆನ್, 5:83)

ಸಭೆಯಲ್ಲಿ ವಿದ್ವಾಂಸರು ಪಾಲುಗೊಂಡಿದ್ದರೆ ಅವರಿಂದ ಎಲ್ಲರೂ ಪ್ರಯೋಜನ ಪಡೆಯುವಂತಾಗಲು ಪಠಿಸಿದ ಸೂಕ್ತದ ಸ್ಪಷ್ಟ ಅರ್ಥ, ಭಾವಾನುವಾದ ಮತ್ತು ಅದರ ತಾತ್ಪರ್ಯಗಳನ್ನು ಅವರು ವಿವರಿಸಬೇಕು.

## ಕುರ್‌ಆನಿನ ಕಂಠಪಾಠ

ಮುಸ್ಲಿಮರು ತಮ್ಮ ಸಾಮರ್ಥ್ಯಕ್ಕನುಸಾರವಾಗಿ ಕಂಠಪಾಠ ಮಾಡುವಂತಾಗಲು ಗರಿಷ್ಠ ಪ್ರಯತ್ನ ಮಾಡಬೇಕಾದುದು ಅಪೇಕ್ಷಣೀಯವಾಗಿದೆ. ಪ್ರತಿದಿನ ಒಂದು ಸೂಕ್ತ ಅಥವಾ ಕೆಲವು ಸೂಕ್ತಗಳನ್ನು ಉತ್ತಮ ರೀತಿಯಲ್ಲಿ ಕಂಠಪಾಠ ಮಾಡಬೇಕು. ಈ ರೀತಿ ಪ್ರಯತ್ನಿಸಿದರೆ ಪವಿತ್ರ ಕುರ್‌ಆನಿನ ಒಂದು ಭಾಗ ಕಂಠಪಾಠ ಮಾಡಲು ಸಾಧ್ಯವಿದೆ.

ಪ್ರವಾದಿಯವರು(ಸ) ಹ. ಅಬೂದರ್ ಗಿಫ್ಫಾರಿಯವರಿಗೆ(ರ) ಹೇಳಿದರು, ಓ ಅಬೂದರ್, ನೀವು ಪ್ರತಿದಿನ ಅಲ್ಲಾಹನ ಗ್ರಂಥದ ಒಂದು ಸೂಕ್ತವನ್ನಾದರೂ ಕಲಿತರೆ ದಿನನಿತ್ಯ ನೂರು ರಕಅತ್ ನಫಿಲ್ ನಿರ್ವಹಿಸುವುದಕ್ಕಿಂತ ಉತ್ತಮ. (ಇಬ್ನುಮಾಜಃ) ಈ ಹದೀಸ್ ಮುಸ್ಲಿಮ್ ಮತ್ತು ಅಬೂದಾವೂದ್‌ನಲ್ಲೂ ಇದೆ.

ಸಹೋದರರೇ, ಈ ಅನುಗ್ರಹವು ಕೈಯಿಂದ ತಪ್ಪಿ ಹೋಗದಂತೆ ಪ್ರಯತ್ನಿಸಿರಿ. ಅಲ್ಲಾಹನು ನಮಗೂ ಕುರ್‌ಆನಿನ ಬಗ್ಗೆ ಚಿಂತನೆ ನಡೆಸಲು ಅನುಗ್ರಹಿಸಲಿ ಮತ್ತು ನಮ್ಮನ್ನು ಚಿಂತನೆ ನಡೆಸುವವರೊಂದಿಗೆ ಸೇರಿಸಲಿ. ಆತನ ಅನುಗ್ರಹದಿಂದ ಈ ವಿಷಯ ಅಸಾಧ್ಯವೇನಲ್ಲ.

# ದೈನಂದಿನ ದುಆಗಳು

## ನಿದ್ದೆಯಿಂದ ಎಚ್ಚರವಾದಾಗ

ಹ. ಹುದೈಫಾ ಮತ್ತು ಹ. ಅಬೂದರ್‍ರಿಂದ(ರ) ವರದಿಯಾಗಿದೆ. ಪ್ರವಾದಿಯವರು(ಸ) ನಿದ್ದೆಯಿಂದ ಎಚ್ಚೆತ್ತ ಕೂಡಲೇ ಈ ದುಆ ಪಠಿಸುತ್ತಿದ್ದರು.

اَلْحَمْدُ لِلّٰهِ الَّذِىْ اَحْيَانَا بَعْدَ مااَمَاتَنَا وَ اِلَيْهِ النُّشُوْرُ۔

"ಅಲ್ ಹಮ್ದುಲಿಲ್ಲಾಹಿಲ್ಲದೀ ಅಹ್‌ಯಾನಾ ಬಅ್‌ದ ಮಾಅಮಾತನಾ ವ ಇಲೈಹಿನ್ನುಷೂರ್" (ಬುಖಾರಿ)

ನಮ್ಮನ್ನು ಮರಣದ ಬಳಿಕ ಜೀವಂತ ಎದ್ದೇಳಿಸಿದ ಅಲ್ಲಾಹನಿಗೆ ಸರ್ವಸ್ತುತಿ ಸ್ತೋತ್ರಗಳು. ಅವನ ಸನ್ನಿಧಿಗೇ ನಾವು ಮರಳಬೇಕಾಗಿದೆ.

1. ಹ. ಅಬೂಹುರೈರಾ(ರ) ಹೇಳುತ್ತಾರೆ:- ಪ್ರವಾದಿ(ಸ) ಹೇಳಿದರು- ನೀವು ನಿದ್ದೆಯಿಂದ ಎಚ್ಚೆತ್ತಾಗ ಈ ದುವಾ ಪಠಿಸಿರಿ.

اَلْحَمْدُ لِلّٰهِ الَّذِىْ رَدَّ عَلَيَّ رُوْحِىْ، وَ عَافَانِىْ فِىْ جَسَدِىْ،

وَ اَذِنَ لِىْ بِذِكْرِهٖ۔

"ಅಲ್ ಹಮ್ದುಲ್ಲಿಲ್ಲಾಹಿಲ್ಲದೀ ರದ್ದ ಅಲಯ್ಯ ರೂಹೀ. ವಆಫಾನೀ ಫೀ ಜಸದೀ, ವ ಅದಿನ ಲೀ ಬಿದಿಕ್‌ರಿಹೀ" (ರವಾಹು ಇಬ್ನ್‌ಸ್ಸುನ್ನಿ)

ನನ್ನ ಆತ್ಮವನ್ನು ನನ್ನೆಡೆಗೆ ಮರಳಿಸಿದ, ನನ್ನ ಶರೀರಕ್ಕೆ ಆರಾಮವನ್ನೊದಗಿಸಿದ ಮತ್ತು ನನಗೆ ನಿನ್ನ ಸ್ಮರಣೆಯ ಸೌಭಾಗ್ಯ ಒದಗಿಸಿದ ಅಲ್ಲಾಹನಿಗೆ ಸಕಲ ಸ್ತುತಿ ಸ್ತೋತ್ರಗಳು.

2. ಉಮ್ಮುಲ್ ಮೂಮಿನೀನ್ ಹ. ಆಯಿಶಾ(ರ) ವರದಿ ಮಾಡಿದ್ದಾರೆ. ಪ್ರವಾದಿ(ಸ) ಈ ರೀತಿ ಹೇಳಿದ್ದಾರೆ:

لَآ اِلٰهَ اِلاَّ اللّٰهُ وَحْدَهٗ لاَ شَرِيْكَ لَهٗ لَهُ الْمُلْكُ
وَلَهُ الْحَمْدُ وَ هُوَ عَلٰى كُلِّ شَئٍ قَدِيْرٌ۔

"ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕ ಲಹೂ, ಲಹುಲ್ ಮುಲ್ಕು ವಲಹುಲ್ ಹಮ್ದು ವಹುವ ಅಲಾಕುಲ್ಲಿ ಶೈಇನ್ ಕದೀರ್"

"ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಏಕೈಕನು, ಅವನಿಗಾರೂ ಸಹಭಾಗಿಗಳಿಲ್ಲ. ಸ್ತುತಿ ಮತ್ತು ಆಧಿಪತ್ಯ ಅವನಿಗೇ ಸೇರಿದೆ ಮತ್ತು ಅವನು ಎಲ್ಲ ಕಾರ್ಯಗಳಲ್ಲೂ ಸರ್ವ ಸಮರ್ಥನಾಗಿರುವನು." ನಿದ್ರೆಯಿಂದ ಎಚ್ಚರವಾದಾಗ ಯಾರು ಈ ರೀತಿ ಪಠಿಸಿದನೋ ಆತನ ಎಲ್ಲ ಪಾಪಗಳನ್ನು ಅಲ್ಲಾಹನು ಮನ್ನಿಸುವನು, ಅದು ಸಮುದ್ರದ ನೊರೆಗಳಷ್ಟು ಅಧಿಕವಾಗಿದ್ದರೂ ಸರಿ.

3. ಪ್ರವಾದಿಯವರು(ಸ) ಈ ರೀತಿ ಹೇಳಿರುವುದಾಗಿ ಹ. ಅಬೂ ಹುರೈರಾ(ರ) ವರದಿ ಮಾಡಿದ್ದಾರೆ- ನಿಮ್ಮಲ್ಲಿ ಯಾರೂ ಮಲಗಿ ಎಚ್ಚೆತ್ತ ಬಳಿಕ ಈ ದುಆ ಪಠಿಸದೆ ಇರಬಾರದು. ಮತ್ತು ಅದಕ್ಕೆ ಉತ್ತರವಾಗಿ ಅಲ್ಲಾಹನು, ನನ್ನ ದಾಸನು ಸತ್ಯವನ್ನೇ ಹೇಳಿದ ಎಂದು ಹೇಳುವಂತಾಗಲಿ.

اَلْحَمْدُ لِلّٰهِ الَّذِىْ خَلَقَ النَّوْمَ وَالْيَقَظَةَ، اَلْحَمْدُ لِلّٰهِ الَّذِىْ
بَعَثَنِىْ سَالِمًا سَوِيًّا، اَشْهَدُ اَنَّ اللّٰهَ يُحْيِ الْمَوْتٰى وَ هُوَ عَلٰى
كُلِّ شَئٍ قَدِيْرٌ۔

"ಅಲ್ ಹಮ್ದುಲಿಲ್ಲಾಹಿಲ್ಲದೀ ಖಲಕನ್ನವ್‌ಮ ವಲ ಯಕಝತ, ಅಲ್ ಹಮ್ದುಲಿಲ್ಲಾಹಿಲ್ಲದೀ ಬಅಸನಿ ಸಾಲಿಮನ್ ಸವಿಯ್ಯನ್, ಅಶ್‌ಹದು ಅನ್ನಲ್ಲಾಹ ಯುಹ್‌ಇಲ್ ಮೌತಾ ವಹುವ ಅಲಾ ಕುಲ್ಲಿ ಶೈಇನ್ ಕದೀರ್"

"ನಿದ್ರೆ ಮತ್ತು ಎಚ್ಚರವನ್ನು ಸೃಷ್ಟಿಸಿದ ಅಲ್ಲಾಹನಿಗೆ ಸಕಲ ಸ್ತುತಿಸ್ತೋತ್ರಗಳು. ನನ್ನನ್ನು ಸುರಕ್ಷಿತವಾಗಿ ಪುನಃ ನಿದ್ರೆಯಿಂದ ಎಬ್ಬಿಸಿದ ಅಲ್ಲಾಹನಿಗೆ ಸಕಲ ಪ್ರಶಂಸೆಗಳು. ಅಲ್ಲಾಹನೇ ಮೃತರಿಗೆ ಜೀವ ಪ್ರದಾನ ಮಾಡುತ್ತಾನೆಂದು ಸಾಕ್ಷ್ಯ ವಹಿಸುತ್ತೇನೆ. ಅವನು ಎಲ್ಲ ಕಾರ್ಯಗಳಲ್ಲೂ ಸಮರ್ಥನಾಗಿರುವನು. (ಇಬ್ನು ಸುನ್ನಿ)

4. ಉಮ್ಮುಲ್ ಮೂಮಿನೀನ್ ಆಯಿಶಾ(ರ) ಹೇಳುತ್ತಾರೆ, "ಪ್ರವಾದಿ(ಸ) ರಾತ್ರಿ ವೇಳೆ ಎಚ್ಚೆತ್ತಾಗ ಈ ರೀತಿ ಪ್ರಾರ್ಥಿಸುತ್ತಿದ್ದರು:

لاَ اِلٰهَ اِلاَّ اَنْتَ سُبْحَانَكَ، اَللّٰهُمَّ اَسْتَغْفِرُكَ لِذَنْبِىْ، وَ
اَسْأَلُكَ رَحْمَتَكَ، اَللّٰهُمَّ زِدْنِىْ عِلْمًا، وَلاَ تُزِغْ قَلْبِىْ بَعْدَ
اِذْ هَدَيْتَنِىْ، وَهَبْ لِىْ مِنْ لَّدُنْكَ رَحْمَةً، اِنَّكَ اَنْتَ
الْوَهَّابُ۔

"ಲಾ ಇಲಾಹ ಇಲ್ಲಾ ಅಂತ ಸುಬ್ಹಾನಕ, ಅಲ್ಲಾಹುಮ್ಮ ಅಸ್ತಗ್‌ಫಿರುಕ ಲಿದಂಬೀ, ವ ಅಸ್‌ಅಲುಕ ರಹ್ಮತಕ, ಅಲ್ಲಾಹುಮ್ಮ ಝಿದ್‌ನೀ ಇಲ್ಮನ್, ವಲಾ ತುಝಿಗ್ ಕಲ್ಬೀ ಬಅ್‌ದ ಇದ್ ಹದೈತನೀ, ವ ಹಬ್‌ಲೀ ಮಿಲ್ಲದುಂಕ ರಹ್ಮತನ್, ಇನ್ನಕ ಅಂತಲ್ ವಹ್ಹಾಬ್"

ಓ ಅಲ್ಲಾಹ್! ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನು ಪರಮ ಪಾವನನು ಓ ಅಲ್ಲಾಹ್! ನಾನು ನಿನ್ನಿಂದ ಕ್ಷಮೆ ಯಾಚಿಸುತ್ತೇನೆ ಮತ್ತು ನಿನ್ನಿಂದ ನಿನ್ನ ಕರುಣೆಯನ್ನು ಬೇಡುತ್ತೇನೆ. ಓ ಅಲ್ಲಾಹ್! ನನ್ನ ಜ್ಞಾನವನ್ನು ಹೆಚ್ಚಿಸು. ಸನ್ಮಾರ್ಗದರ್ಶನ ಮಾಡಿದ ಬಳಿಕ ನನ್ನ ಹೃದಯವನ್ನು ವಕ್ರಗೊಳಿಸದಿರು. ನಿನ್ನ ವತಿಯಿಂದ ನನಗೆ ಕರುಣೆಯನ್ನು ದಯಪಾಲಿಸು. ಖಂಡಿತ ನೀನು ಬಹಳ ಹೆಚ್ಚು ದಯಪಾಲಿಸುವವನಾಗಿರುವೆ.

(ಅಬೂದಾವೂದ್)

## ಉಡುಪು ಧರಿಸುವಾಗ ಮತ್ತು ಕಳಚುವಾಗ ಹೇಳುವ ದುಆ

1. ಹ. ಅಬೂಸಈದ್ ಖುದ್ರೀಯವರಿಂದ(ರ) ಉಲ್ಲೇಖಿತ. ಪ್ರವಾದಿಯವರು(ಸ) ವಸ್ತ್ರ, ಶರ್ಟು, ನಿಲುವಂಗಿ, ಇಜಾರು, ಮುಂಡಾಸು ಇತ್ಯಾದಿ ತೊಡುವಾಗ ಅದರ ಹೆಸರೆತ್ತಿ ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ اِنِّىْ اَسْأَلُكَ مِنْ خَيْرِهٖ وَ خَيْرِ مَا هُوَ لَهٗ، وَ اَعُوْذُبِكَ
مِنْ شَرِّهٖ وَ شَرِّ مَا هُوَ لَهٗ۔

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಮಿನ್ ಖೈರಿಹೀ ವಖೈರಿ ಮಾ ಹುವಲಹೂ, ವಅಊದುಬಿಕ ಮಿನ್ ಶರ್‍ರಿಹೀ ವ ಶರ್‍ರಿ ಮಾ ಹುವಲಹೂ"

ಓ ಅಲ್ಲಾಹ್! ನಿನಗೆ ವಂದನೆ. ನೀನು ನನಗೆ ಈ ವಸ್ತ್ರ ತೊಡಿಸಿದೆ. ನಾನು ನಿನ್ನಿಂದ ಇದರ ಒಳಿತನ್ನು ಬಯಸುತ್ತೇನೆ ಮತ್ತು ಇದು ಯಾವುದಕ್ಕಾಗಿ ಮಾಡಲ್ಪಟ್ಟಿದೆಯೋ ಅದರ ಒಳಿತನ್ನೂ ಬಯಸುತ್ತೇನೆ. ಈ ವಸ್ತ್ರದ ಕೆಡುಕಿನಿಂದ ಮತ್ತು ಇದು ಯಾವುದಕ್ಕಾಗಿ ಮಾಡಲ್ಪಟ್ಟಿದೆಯೋ ಅದರ ಕೆಡುಕಿನಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.

(ಇಬ್ನು ಸುನ್ನಿ)

2. ಹ. ಮುಆದ್ ಬಿನ್ ಅನಸ್(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಹೇಳಿದರು: 'ಯಾರು ಹೊಸ ಬಟ್ಟೆ ಧರಿಸುವಾಗ ಈ ರೀತಿ ಪ್ರಾರ್ಥಿಸುತ್ತಾರೋ ಅಲ್ಲಾಹನು ಆತನ ಗತಪಾಪಗಳನ್ನು ಮನ್ನಿಸುವನು.'

اَلْحَمْدُ لِلّٰهِ الَّذِیْ كَسَانِیْ هٰذَا الثَّوْبَ وَرَزَقَنِیْهِ مِنْ غَیْرِ حَوْلٍ مِّنِّیْ وَلَا قُوَّةٍ۔

"ಅಲ್ ಹಮ್ದುಲಿಲ್ಲಾಹಿಲ್ಲದೀ ಕಸಾನಿ ಹಾದಸ್ಸೌಬ ವರಝುಕನೀ ಮಿನ್ ಗೈರಿ ಹೌಲಿಮ್ಮಿನ್ನೀ ವಲಾ ಖುವ್ವತಿನ್"

"ಈ ವಸ್ತ್ರ ತೊಡಿಸಿದ ಹಾಗೂ ನನ್ನ ಪ್ರಯತ್ನ ಮತ್ತು ಸಾಮರ್ಥ್ಯಗಳು ಇಲ್ಲದಾಗಲೂ ಅದನ್ನು ಕರುಣಿಸಿದ ಅಲ್ಲಾಹನಿಗೆ ವಂದನೆಗಳು." (ಇಬ್ನು ಸುನ್ನಿ)

3. ಹ. ಅನಸ್ ಬಿನ್ ಮಾಲಿಕ್(ರ) ವರದಿ ಮಾಡಿದ್ದಾರೆ. ಪ್ರವಾದಿ ಹೇಳಿದ್ದಾರೆ: ಮುಸ್ಲಿಮನು ಬಟ್ಟೆ ಕಳಚುವಾಗ ಈ ರೀತಿ ಹೇಳಲಿ:

بِسْمِ اللّٰهِ الَّذِیْ لَآ اِلٰهَ اِلَّا هُوَ۔

"ಬಿಸ್ಮಿಲ್ಲಾಹಿಲ್ಲದೀ ಲಾ ಇಲಾಹ ಇಲ್ಲಾಹುವ"

ಅಲ್ಲಾಹನ ನಾಮದಿಂದ (ಆತನೇ ಬಟ್ಟೆ ಧರಿಸುವ ಮತ್ತು ಕಳಚುವ ಆಜ್ಞೆ ನೀಡಿದ್ದಾನೆ.) ಆತನ ಹೊರತು ಅನ್ಯ ಆರಾಧ್ಯರಿಲ್ಲ (ಆದ್ದರಿಂದ ಆತನ ಆಜ್ಞೆಗಳನ್ನು ಅನುಸರಿಸಬೇಕು) (ಇಬ್ನು ಸುನ್ನಿ)

ಏಕೆಂದರೆ ಉಡುಪು ಜಿನ್ನ್‌ಗಳ (ಯಕ್ಷ) ಕಣ್ಣುಗಳು ಮತ್ತು ಮನುಷ್ಯರ ಗುಹ್ಯಾಂಗಗಳ ಮಧ್ಯೆ ಮರೆ ಮಾಚುವಂತಹ ಸಾಧನವಾಗಿದೆ.

## ಮನೆಯಿಂದ ಹೊರಡುವ ಮತ್ತು ಪ್ರವೇಶಿಸುವ ದುಆ

1. ಹ. ಅನಸ್(ರ) ಹೇಳುತ್ತಾರೆ- ಪ್ರವಾದಿ(ಸ) ಹೇಳಿದರು- ಮನೆಯಿಂದ ಹೊರಡುವಾಗ ಮನುಷ್ಯ ಈ ರೀತಿ ಪ್ರಾರ್ಥಿಸಲಿ.

بِسْمِ اللّٰهِ تَوَكَّلْتُ عَلَى اللّٰهِ، لَا حَوْلَ وَلَا قُوَّةَ اِلَّا بِاللّٰهِ۔

(رواه ابو داؤد والترمذی والنسائی و قال الترمذی حدیث حسن صحیح)

"ಬಿಸ್ಮಿಲ್ಲಾಹಿ ತವಕ್ಕಲ್ತು ಅಲಲ್ಲಾಹಿ, ಲಾ ಹೌಲ ವಲಾ ಖುವ್ವತ ಇಲ್ಲಾ ಬಿಲ್ಲಾಹಿ"

ಅಲ್ಲಾಹನ ನಾಮದಿಂದ ನಾನು ಹೊರಗೆ ಕಾಲಿಡುತ್ತೇನೆ. ಅವನ ಮೇಲೆಯೇ ನನ್ನ ಭರವಸೆ ಇದೆ. ಅಲ್ಲಾಹನ ಹೊರತು ಇನ್ನಾರಲ್ಲಿಯೂ ಶಕ್ತಿ ಸಾಮರ್ಥ್ಯಗಳಿಲ್ಲ.

(ಅಬೂದಾವೂದ್, ತಿರ್ಮಿದಿ, ನಸಾಈ)

ಈ ರೀತಿ ಪಠಿಸಿದರೆ ಅವನಿಗೆ ಹೇಳಲಾಗುವುದು. ನಿನ್ನ ಮೇಲ್ನೋಟಕ್ಕೆ ಅಲ್ಲಾಹನೇ ಸಾಕು. ನಿನ್ನನ್ನು ದುರ್ಮಾರ್ಗದಿಂದ ರಕ್ಷಿಸಲಾಗಿದೆ ಮತ್ತು ಸನ್ಮಾರ್ಗದಲ್ಲಿ ಹಾಕಲಾಗಿದೆ. ಶೈತಾನನು ಆತನಿಂದ ದೂರವಾಗುವನು.

2. ಹ. ಅಬೂ ಮಾಲಿಕ್ ಅಶ್ಅರಿ(ರ) ಹೇಳುತ್ತಾರೆ: ಪ್ರವಾದಿ(ಸ) ಹೇಳಿದ್ದಾರೆ- ನಿಮ್ಮ ಪೈಕಿ ಯಾರಾದರೂ ಮನೆಗೆ ಪ್ರವೇಶಿಸುವಾಗ ಈ ರೀತಿ ಪ್ರಾರ್ಥಿಸಲಿ ಮತ್ತು ಮನೆ ಮಂದಿಗೆ ಸಲಾಮ್ ಹೇಳಲಿ:

اَللّٰهُمَّ اِنِّىْ اَسْاَلُكَ خَيْرَ الْمَوْلِجِ وَ خَيْرَ الْمَخْرَجِ، بِاسْمِ
اللّٰهِ وَلَجْنَا، وَ بِاسْمِ اللّٰهِ خَرَجْنَا وَ عَلَى اللّٰهِ رَبِّنَا تَوَكَّلْنَا۔

"ಅಲ್ಲಾಹುಮ್ಮ ಇನ್ನೀ ಅಸ್ಅಲುಕ ಖೈರಲ್ ಮೌಲಿಜಿ ವ ಖೈರಲ್ ಮಖ್ರಜಿ, ಬಿಸ್ಮಿಲ್ಲಾಹಿ ವಲಜ್ನಾ, ವಬಿಸ್ಮಿಲ್ಲಾಹಿ ಖರಜ್ನಾ ವಅಲಲ್ಲಾಹಿ ರಬ್ಬಿನಾ ತವಕ್ಕಲ್ನಾ"

"ಓ ಅಲ್ಲಾಹ್! ನಾನು ನಿನ್ನಲ್ಲಿ ಪ್ರವೇಶಿಸುವ ಮತ್ತು ಹೊರಡುವ ಅತ್ಯುತ್ತಮ ಸ್ಥಾನವನ್ನು ಬಯಸುತ್ತೇನೆ. ಅಲ್ಲಾಹನ ನಾಮದಿಂದಲೇ ಒಳ ಪ್ರವೇಶಿಸಿದೆವು ಮತ್ತು ಅಲ್ಲಾಹನ ನಾಮದಿಂದಲೇ ಹೊರಟೆವು. ಅಲ್ಲಾಹನ ಮೇಲೆಯೇ ನಾವು ಭರವಸೆ ಯಿರಿಸುತ್ತೇವೆ." (ಅಬೂದಾವೂದ್)

## ಮಸೀದಿಗೆ ಪ್ರವೇಶಿಸುವಾಗ ಮತ್ತು ಅಲ್ಲಿಂದ ಹೊರಡುವಾಗ ಹೇಳುವ ದುಆ

1. ಹ. ಅಬ್ದುಲ್ಲಾ ಬಿನ್ ಅಬ್ಬಾಸ್‌ರಿಂದ(ರ) ವರದಿಯಾಗಿದೆ. ಪ್ರವಾದಿ(ಸ) ಮಸೀದಿಯ ಕಡೆಗೆ ಹೊರಟಾಗ ಈ ರೀತಿ ಪ್ರಾರ್ಥಿಸುತ್ತಿದ್ದರು.

اَللّٰهُمَّ اجْعَلْ فِىْ قَلْبِىْ نُوْرًا، وَ فِىْ بَصَرِىْ نُوْرًا، وَ فِىْ سَمْعِىْ نُوْرًا،
وَ عَنْ يَمِيْنِىْ نُوْرًا، وَ عَنْ يَسَارِىْ نُوْرًا، وَ فَوْقِىْ نُوْرًا وَ
تَحْتِىْ نُوْرًا، وَ اَمَامِىْ نُوْرًا، وَ خَلْفِىْ نُوْرًا، وَاجْعَلْ لِّىْ نُوْرًا۔

"ಅಲ್ಲಾಹುಮ್ಮಜ್ಅಲ್ ಫೀ ಕಲ್ಬೀ ನೂರನ್, ವಫೀ ಬಸರೀ ನೂರನ್, ವಫೀ ಸಮ್ಈ ನೂರನ್, ವ ಅನ್‌ಯಮೀನೀ ನೂರನ್, ವಅನ್ ಯಸಾರೀ ನೂರನ್, ವ ಫೌಕೀನೂರನ್ ವತಹ್ತೀ ನೂರನ್, ವ ಅಮಾಮೀ ನೂರನ್, ವಖಲ್ಕೀ ನೂರನ್ ವಜ್ಅಲ್‌ಲೀ ನೂರನ್"

ಓ ಅಲ್ಲಾಹ್! ನನ್ನ ಹೃದಯವನ್ನು ಪ್ರಕಾಶಗೊಳಿಸು. ನನ್ನ ದೃಷ್ಟಿ ಮತ್ತು ಶ್ರವಣವನ್ನು ಪ್ರಕಾಶದಿಂದ ಬೆಳಗಿಸು. ನನ್ನ ಎಡ-ಬಲ, ಮೇಲೆ-ಕೆಳಗೆ, ಹಿಂದೆ-ಮುಂದೆ

ಮತ್ತು ಎಲ್ಲ ಕಡೆಯಿಂದಲೂ ಪ್ರಕಾಶಿಸುವಂತೆ ಮಾಡು ಹಾಗೂ ನನ್ನನ್ನು ಸಂಪೂರ್ಣ ಪ್ರಕಾಶಮಯಗೊಳಿಸು. (ಬುಖಾರಿ)

2. ಹ. ಅಬ್ದುಲ್ಲಾ ಬಿನ್ ಅಮ್ರ್ ಬಿನ್ ಆಸ್(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಮಸೀದಿಗೆ ಪ್ರವೇಶಿಸುವಾಗ ಈ ರೀತಿ ಹೇಳುತ್ತಿದ್ದರು.

اَعُوْذُ بِاللّٰهِ الْعَظِيْمِ وَ بِوَجْهِهِ الْكَرِيْمِ، وَ سُلْطَانِهِ الْقَدِيْمِ، مِنَ الشَّيْطَانِ الرَّجِيْمِ.

"ಅಊದುಬಿಲ್ಲಾಹಿಲ್ ಅಝೀಮಿ ವಬಿವಜ್‌ಹಿಹಿಲ್ ಕರೀಮಿ. ವ ಸುಲ್ತಾನಿಹಿಲ್ ಕದೀಮಿ, ಮಿನಶ್ಶೈತಾನಿರ್‍ರಜೀಮ್"

'ಶಪಿತ ಶೈತಾನನ ಉಪಟಳದಿಂದ ಮಹಿಮಾವಂತ ಪ್ರಭುವಿನ, ಆತನ ಪ್ರತಾಪಶಾಲಿ ಮುಖಾರವಿಂದದ, ಅನಾದಿ ಆಧಿಪತ್ಯದ ಅಭಯ ಯಾಚಿಸುತ್ತೇನೆ. (ಅಬೂದಾವೂದ್)

ಪ್ರವಾದಿ(ಸ) ಹೇಳಿದರು- ಯಾರಾದರೂ ಈ ದುಆ ಪಠಿಸಿದರೆ ಶೈತಾನನು ತುಂಬಾ ನಿರಾಶನಾಗುವನು, 'ಈತ ಇಂದು ದಿನವಿಡೀ ನನ್ನ ಉಪಟಳದಿಂದ ಪಾರಾದನು' ಎಂದು ಹೇಳುತ್ತಾನೆ.

3. ಹ. ಅನಸ್ ಬಿನ್ ಮಾಲಿಕ್‌ರಿಂದ(ರ) ವರದಿಯಾಗಿದೆ. ಪ್ರವಾದಿಯವರು(ಸ) ಮಸೀದಿಗೆ ಪ್ರವೇಶಿಸುವಾಗ ಈ ರೀತಿ ಪ್ರಾರ್ಥಿಸುತ್ತಿದ್ದರು.

بِسْمِ اللّٰهِ اَللّٰهُمَّ صَلِّ عَلٰى مُحَمَّدٍ.

"ಬಿಸ್ಮಿಲ್ಲಾಹಿ ಅಲ್ಲಾಹುಮ್ಮ ಸಲ್ಲಿ ಅಲಾ ಮುಹಮ್ಮದಿನ್"

ಅಲ್ಲಾಹನ ನಾಮದಿಂದ ಪ್ರವೇಶಿಸುತ್ತೇನೆ. ಓ ಅಲ್ಲಾಹ್! ನೀನು ಮುಹಮ್ಮದ್(ಸ) ಅವರ ಮೇಲೆ ಅನುಗ್ರಹವನ್ನಿಳಿಸು.

ಮಸೀದಿಯಿಂದ ಹೊರ ನಡೆಯುವಾಗ ಈ ರೀತಿ ಹೇಳುತ್ತಿದ್ದರು:

اَللّٰهُمَّ صَلِّ عَلٰى مُحَمَّدٍ.

"ಅಲ್ಲಾಹುಮ್ಮ ಸಲ್ಲಿ ಅಲಾ ಮುಹಮ್ಮದಿನ್"

ಓ ಅಲ್ಲಾಹ್! ನೀನು ಮುಹಮ್ಮದ್‌ರ(ಸ) ಮೇಲೆ ಅನುಗ್ರಹ ಸುರಿಸು.

(ಇಬ್ನು ಸುನ್ನಿ)

4. ಅಬೂಹುಮೈದ್ ಅಥವಾ ಅಬೂ ಉಸೈದ್‌ರಿಂದ(ರ) ವರದಿಯಾಗಿದೆ. ಪ್ರವಾದಿ(ಸ) ಹೇಳಿದರು- ನಿಮ್ಮ ಪೈಕಿ ಯಾರಾದರೂ ಮಸೀದಿಗೆ ಪ್ರವೇಶಿಸುವಾಗ ಮೊದಲು ಪ್ರವಾದಿ ಯವರ(ಸ) ಮೇಲೆ ಸ್ವಸ್ತಿ ವಚನ(ಸಲಾತ್) ಹೇಳಲಿ. ತರುವಾಯ ಈ ದುಆ ಹೇಳಲಿ.

اَللّٰهُمَّ افْتَحْ لِيْ اَبْوَابَ رَحْمَتِكَ۔

"ಅಲ್ಲಾಹುಮ್ಮಫ್‌ತಹ್‌ಲೀ ಅಬ್‌ವಾಬ ರಹ್ಮತಿಕ"

ಓ ಅಲ್ಲಾಹ್! ನನಗೆ ನಿನ್ನ ಕರುಣೆಯ ದ್ವಾರಗಳನ್ನು ತೆರೆದುಕೊಡು.

ಮಸೀದಿಯಿಂದ ಹೊರಡುವಾಗ ಪ್ರವಾದಿಯವರ(ಸ) ಮೇಲೆ ಸ್ವಸ್ತಿ ವಚನ (ಸಲಾತ್) ಹೇಳಲಿ. ತರುವಾಯ ಈ ರೀತಿ ದುಆ ಹೇಳಲಿ.

اَللّٰهُمَّ اِنِّیْ اَسْئَلُکَ مِنْ فَضْلِکَ۔

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಮಿನ್ ಫದ್‌ಲಿಕ"

ಓ ಅಲ್ಲಾಹ್! ನಾನು ನಿನ್ನಿಂದ ನಿನ್ನ ಅನುಗ್ರಹಗಳನ್ನು ಯಾಚಿಸುತ್ತೇನೆ. (ಮುಸ್ಲಿಮ್)

## ಶೌಚಾಲಯಕ್ಕೆ ಪ್ರವೇಶಿಸುವ ಮತ್ತು ಹೊರ ಬರುವ ದುಆ

1. ಪ್ರವಾದಿ(ಸ) ಹೇಳಿರುವುದಾಗಿ ಅನಸ್ ಬಿನ್ ಮಾಲಿಕ್(ರ) ವರದಿ ಮಾಡಿದ್ದಾರೆ ಶೌಚಾಲಯಕ್ಕೆ ಪ್ರವೇಶಿಸುವಾಗ ಈ ರೀತಿ ಹೇಳುತ್ತಿದ್ದರು.

اَللّٰهُمَّ اِنِّیْ اَعُوْذُبِکَ مِنَ الْخُبُثِ وَالْخَبَائِثِ۔

"ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನಲ್ ಖುಬುಸಿ ವಲ್ ಖಬಾಇಸಿ"

ಓ ಅಲ್ಲಾಹ್! ಗಂಡು ಮತ್ತು ಹೆಣ್ಣು ಶೈತಾನರಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.

2. ಹ. ಅಬ್ದುಲ್ಲಾ ಬಿನ್ ಉಮರ್(ರ) ಈ ರೀತಿ ವರದಿ ಮಾಡುತ್ತಾರೆ. ಪ್ರವಾದಿ(ಸ) ಶೌಚಾಲಯದಿಂದ ಹೊರ ಬರುವಾಗ ಈ ಪದಗಳಿಂದ ಪ್ರಾರ್ಥಿಸುತ್ತಿದ್ದರು.

اَلْحَمْدُ لِلّٰهِ الَّذِیْ أَذَاقَنِیْ لَذَّتَهٗ، وَاَبْقٰی فِیَّ قُوَّتَهٗ، وَ دَفَعَ عَنِّیْ اَذَاهُ۔

"ಅಲ್ ಹಮ್ದುಲಿಲ್ಲಾಹಿಲ್ಲದೀ ಅದಾಕನೀ ಲದ್ದತಹೂ ವ ಅಬ್‌ಕಾ ಫಿಯ್ಯ ಕುವ್ವತಹೂ ವ ದಫಅ ಅನ್ನೀ ಅದಾಹು"

"ಸ್ವಾದಿಷ್ಟ ಆಹಾರ ಉಣಿಸಿದ, ಅದರ ಪೌಷ್ಟಿಕತೆಯನ್ನು ನನ್ನ ದೇಹದಲ್ಲಿ ಉಳಿಸಿದ ಮತ್ತದರ ತೊಂದರೆಯನ್ನುಂಟು ಮಾಡುವ ವಸ್ತುವನ್ನು ನನ್ನಿಂದ ನೀಗಿಸಿದ ಅಲ್ಲಾಹನಿಗೆ ಸರ್ವ ಸ್ತುತಿಗಳು." (ಇಬ್ನು ಸುನ್ನ, ತಬ್ರಾನಿ)

3. ಪ್ರವಾದಿಯವರು(ಸ) ಶೌಚಾಲಯದಿಂದ ಹೊರ ಬರುವಾಗ ಈ ರೀತಿ ಹೇಳುತ್ತಿದ್ದರೆಂದು ಉಮ್ಮುಲ್ ಮೂಮಿನೀನ್ ಹ. ಆಯಿಶಾ(ರ) ವರದಿ ಮಾಡಿದ್ದಾರೆ.

غُفْرَانَكَ۔

"ಗುಫ್ರಾನಕ"

ನಿನ್ನ ಕ್ಷಮೆಯನ್ನು ಯಾಚಿಸುತ್ತೇನೆ. (ಅಬೂದಾವೂದ್)

4. ಹ. ಅಬ್ದುಲ್ಲಾ ಬಿನ್ ಅಬ್ಬಾಸ್‌ರಿಂದ(ರ) ವರದಿಯಾಗಿದೆ. ಪ್ರವಾದಿ(ಸ) ಹೇಳಿದ್ದಾರೆ. ನಿಮ್ಮ ಪೈಕಿ ಯಾರಾದರೂ ಪತ್ನಿಯನ್ನು ಸಮೀಪಿಸುವಾಗ ಈ ರೀತಿ ಹೇಳಲಿ:

بِسْمِ اللّٰهِ، اَللّٰهُمَّ جَنِّبْنَا الشَّيْطَانَ وَ جَنِّبِ الشَّيْطَانَ مَا رَزَقْتَنَا۔

"ಬಿಸ್ಮಿಲ್ಲಾಹಿ ಅಲ್ಲಾಹುಮ್ಮ ಜನ್ನಿಬ್ನಶ್ಶೈತಾನ ವ ಜನ್ನಿಬಿಶ್ಶೈತಾನ ಮಾರಝುಕ್ತನಾ"

ಅಲ್ಲಾಹನ ನಾಮದಿಂದ, (ಸಮೃದ್ಧಿಯುಂಟಾಗಲಿ). ಓ ಅಲ್ಲಾಹ್! ನಮ್ಮಿಂದ ಶೈತಾನನನ್ನು ದೂರ ಮಾಡು. ನಮಗೆ ದಯಪಾಲಿಸುವ ಸಂತಾನವನ್ನು ಶೈತಾನನಿಂದ ರಕ್ಷಿಸು. (ಈ ಮಿಲನದಿಂದ ಅವರಲ್ಲಿ ಸಂತಾನ ಉಂಟಾದರೆ ಶೈತಾನನು ಅದಕ್ಕೆಂದೂ ಹಾನಿಯನ್ನುಂಟು ಮಾಡಲಾರ.)

## ವುಝೂ, ಗುಸುಲ್ ಮತ್ತು ಅದಾನ್‌ನ ದುಆ

1. ಹ. ಅಬೂ ಮೂಸಾ ಅಶ್‌ಅರಿ(ರ) ಹೇಳುತ್ತಾರೆ. ಒಮ್ಮೆ ನಾನು ಪ್ರವಾದಿಯವರ(ಸ) ಬಳಿಗೆ ಹೋಗಿದ್ದೆ. ಆಗ ಅವರು(ಸ) ವುಝೂ ಮಾಡುತ್ತಿದ್ದರು ಮತ್ತು ಈ ರೀತಿ ಪಠಿಸುತ್ತಿದ್ದರು.

اَللّٰهُمَّ اغْفِرْلِیْ ذَنْبِیْ، وَ وَسِّعْ لِیْ فِیْ دَارِیْ وَ بَارِكْ لِیْ فِیْ رِزْقِیْ۔

"ಅಲ್ಲಾಹುಮ್ಮಗ್‌ಫಿರ್ಲೀ ದಂಬೀ, ವವಸ್ಸಿಲ್ ಲೀ ಫೀ ದಾರೀ ವ ಬಾರಿಕ್‌ಲೀ ಫೀ ರಿಝ್ಕೀ"

ಓ ಅಲ್ಲಾಹ್! ನನ್ನ ಪಾಪಗಳನ್ನು ಕ್ಷಮಿಸು. ನನ್ನ ಮನೆಯಲ್ಲಿ ಸುಭಿಕ್ಷೆಯನ್ನುಂಟು ಮಾಡು. ನನ್ನ ಜೀವನಾಧಾರದಲ್ಲಿ ಸಮೃದ್ಧಿಯನ್ನುಂಟು ಮಾಡು.

ನಾನು ನಿವೇದಿಸಿದೆ "ಓ ಅಲ್ಲಾಹನ ಸಂದೇಶವಾಹಕರೇ, ತಾವು ಈ ರೀತಿ ಪ್ರಾರ್ಥಿಸುತ್ತಿದ್ದೀರಾ?" ಅವರು(ಸ) ಹೇಳಿದರು: "ಈ ಪ್ರಾರ್ಥನೆಯಲ್ಲಿ ಎಲ್ಲವೂ ಒಳಗೊಂಡಿಲ್ಲವೇ?" (ನಸಾಈ, ಇಬ್ನು ಸುನ್ನಿ)

2. ಹ. ಉಮರ್ ಬಿನ್ ಖತ್ತಾಬ್(ರ) ಹೇಳುತ್ತಾರೆ. ಪ್ರವಾದಿ(ಸ) ಹೇಳಿರುವರು: ಯಾರು ಅತ್ಯುತ್ತಮ ರೀತಿಯಲ್ಲಿ ವುಝೂ ಮಾಡಿದ ಬಳಿಕ ಈ ದುಆ ಪಠಿಸುತ್ತಾನೋ ಅವನಿಗಾಗಿ ಸ್ವರ್ಗದ ಎಂಟು ಬಾಗಿಲುಗಳು ತೆರೆಯಲ್ಪಡುತ್ತವೆ. ಅವನು ತನಗೆ ಬೇಕಾದ ಬಾಗಿಲ ಮೂಲಕ ಸ್ವರ್ಗವನ್ನು ಪ್ರವೇಶಿಸಬಹುದು.

اَشْهَدُ اَنْ لَآ اِلٰـهَ اِلَّا اللّٰهُ وَحْدَهُ لاَ شَرِيْكَ لَهُ، وَ اَشْهَدُ اَنَّ مُحَمَّدًا عَبْدُهُ وَ رَسُوْلُهُ - اَللّٰهُمَّ اجْعَلْنِىْ مِنَ التَّوَّابِيْنَ وَاجْعَلْنِىْ مِنَ الْمُتَطَهِّرِيْنَ-

"ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವಹ್ದಹೂ ಲಾ ಶರೀಕ ಲಹೂ ವ ಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವ ರಸೂಲುಹೂ- ಅಲ್ಲಾಹುಮ್ಮಜ್‌ಅಲ್‌ನೀ ಮಿನತ್ತವ್ವಾಬೀನ ವಜ್ ಅಲ್‌ನೀ ಮಿನಲ್ ಮುತತ್ವಹ್ಹಿರೀನ್"

ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಏಕೈಕನೂ ಸಹಭಾಗಿಗಳಿಲ್ಲದವನೂ ಆಗಿದ್ದಾನೆಂದು ನಾನು ಸಾಕ್ಷ್ಯ ವಹಿಸುತ್ತೇನೆ ಮತ್ತು ಮುಹಮ್ಮದ್(ಸ) ಅಲ್ಲಾಹನ ದಾಸರೂ ಅವನ ಸಂದೇಶವಾಹಕರೂ ಆಗಿರುವರೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ಓ ಅಲ್ಲಾಹ್! ನನ್ನನ್ನು ಅತ್ಯಧಿಕ ಪಶ್ಚಾತ್ತಾಪಪಡುವವರಲ್ಲಿ ಮತ್ತು ಶುದ್ಧವಾಗುವವರಲ್ಲಿ ಸೇರಿಸು. (ಮುಸ್ಲಿಮ್, ತಿರ್ಮಿದಿ)

3. ಹ. ಜಾಬಿರ್ ಬಿನ್ ಅಬ್ದುಲ್ಲಾ(ರ) ಹೇಳುತ್ತಾರೆ. ಪ್ರವಾದಿ(ಸ) ಹೇಳಿರುವರು 'ಯಾರು ಅದಾನ್ ಆಲಿಸಿ ಈ ದುಆ ಪಠಿಸುತ್ತಾನೋ ಆತನಿಗೆ ಕಿಯಾಮತ್‌ನಂದು ನನ್ನ ಶಿಫಾರಸು ಖಾತ್ರಿಯಾಯಿತು.

اَللّٰهُمَّ رَبَّ هٰذِهِ الدَّعْوَةِ التَّآمَّةِ، وَالصَّلٰوةِ الْقَآئِمَةِ اٰتِ مُحَمَّدَا اِلْوَسِيْلَةَ وَالْفَضِيْلَةَ وَابْعَثْهُ مَقَامًا مَّحْمُوْدَا اِلَّذِىْ وَعَدْتَّهُ-

"ಅಲ್ಲಾಹುಮ್ಮ ರಬ್ಬ ಹಾದಿಹಿದ್ದಆ್‌ವತಿ ತ್ತಾಮ್ಮತಿ, ವಸ್ಸಲಾತಿಲ್ ಕಾಇಮತಿ ಆತಿ ಮುಹಮ್ಮದನಿಲ್ ವಸೀಲತ ವಲ್ ಫದೀಲತ ವಬ್‌ಅಸ್‌ಹು ಮಕಾಮಮ್ಮಹ್ಮೂದನಿಲ್ಲದೀ ವಅತ್ತಹು"

ಓ ಅಲ್ಲಾಹ್! ಈ ಪೂರ್ಣ ಕರೆ ಮತ್ತು ಈ ನಿಲ್ಲುವ ನಮಾಝ್‌ನ ಒಡೆಯನೇ! ಮುಹಮ್ಮದ್‌ರಿಗೆ(ಸ) ನಿನ್ನ ಸಾಮೀಪ್ಯ ಮತ್ತು ಔನ್ನತ್ಯವನ್ನು ದಯಪಾಲಿಸು! ನೀನು ಅವರಿಗೆ ವಾಗ್ದಾನ ಮಾಡಿರುವ ಮಕಾಮು ಮಹ್ಮೂದ್ (ಅತ್ಯುನ್ನತ ಸ್ತುತ್ಯರ್ಹ ಸ್ಥಾನ)ನಲ್ಲಿ ಅವರನ್ನು ಪ್ರತಿಷ್ಠಾಪಿಸು. (ಬುಖಾರಿ)

## ಆಹಾರ ಸೇವನೆಯ ದುಆಗಳು

1. ಹ. ಅಬ್ದುಲ್ಲಾ ಬಿನ್ ಉಮರ್(ರ) ವರದಿ ಮಾಡುತ್ತಾರೆ. ಪ್ರವಾದಿಯವರಿಗೆ(ಸ) ಊಟ ಬಡಿಸಿದಾಗ ಈ ರೀತಿ ಹೇಳುತ್ತಿದ್ದರು.

اَللّٰهُمَّ بَارِكْ لَنَا فِيمَا رَزَقْتَنَا، وَقِنَا عَذَابَ النَّارِ، بِسْمِ اللّٰهِ۔

"ಅಲ್ಲಾಹುಮ್ಮ ಬಾರಿಕ್ ಲನಾ ಫೀ ಮಾ ರಝುಕ್ತನಾ, ವಕಿನಾ ಅದಾಬನ್ನಾರ್, ಬಿಸ್ಮಿಲ್ಲಾಹಿ"

ಓ ಅಲ್ಲಾಹ್! ನೀನು ನಮಗೆ ಉಣಿಸಿರುವುದರಲ್ಲಿ ಸಮೃದ್ಧಿಯನ್ನು ದಯಪಾಲಿಸು. ನಮ್ಮನ್ನು ಅಗ್ನಿಯ ಯಾತನೆಯಿಂದ ರಕ್ಷಿಸು. ಅಲ್ಲಾಹನ ನಾಮದಿಂದಲೇ ನಾನಿದನ್ನು ಆರಂಭಿಸುತ್ತೇನೆ. (ಇಬ್ನು ಸುನ್ನಿ)

2. ಉಮ್ಮುಲ್ ಮೂಮಿನೀನ್ ಹ. ಆಯಿಶಾ(ರ) ಹೇಳುತ್ತಾರೆ. ಪ್ರವಾದಿ(ಸ) ಹೇಳಿದರು- 'ನೀವು ಊಟ ಮಾಡಲು ಆರಂಭಿಸುವಾಗ ಬಿಸ್ಮಿಲ್ಲಾಹ್ ಎಂದು ಹೇಳಿರಿ. ಆರಂಭದಲ್ಲಿ ಬಿಸ್ಮಿಲ್ಲಾಹ್ ಎಂದು ಹೇಳಲು ಮರೆತು ಹೋದರೆ ಆ ಬಳಿಕ بِسْمِ اللّٰهِ اَوَّلَهُ وَ آخِرَهُ۔ 'ಬಿಸ್ಮಿಲ್ಲಾಹಿ ಅವ್ವಲಹು ವ ಆಖಿರಹು' (ಅಲ್ಲಾಹನ ನಾಮದಿಂದಲೇ ಆರಂಭ ಮತ್ತು ಅಂತ್ಯ) ಎಂದು ಹೇಳಿರಿ. (ಅಬೂದಾವೂದ್, ತಿರ್ಮಿದಿ)

3. ಅಬೂ ಸಈದ್ ಖುದ್ರಿ(ರ) ಹೇಳುತ್ತಾರೆ, ಪ್ರವಾದಿ(ಸ) ಊಟದಿಂದ ವಿರಮಿಸಿದ ಬಳಿಕ ಈ ರೀತಿ ಪ್ರಾರ್ಥಿಸುತ್ತಿದ್ದರು.

اَلْحَمْدُ لِلّٰهِ الَّذِىْ اَطْعَمَنَا وَ سَقَانَا وَ جَعَلَنَا مِنَ الْمُسْلِمِيْنَ۔

"ಅಲ್ ಹಮ್ದುಲಿಲ್ಲಾಹಿಲ್ಲದೀ ಅತ್‌ಅಮನಾ ವಸಕಾನಾ ವಜಅಲನಾ ಮಿನಲ್ ಮುಸ್ಲಿಮೂನ್"

ನಮಗೆ ತಿನ್ನಿಸಿದ, ಕುಡಿಸಿದ ಹಾಗೂ ನಮ್ಮನ್ನು ಮುಸ್ಲಿಮರಾಗಿ ಮಾಡಿದ ಅಲ್ಲಾಹನಿಗೆ ಸರ್ವಸ್ತುತಿ ಸ್ತೋತ್ರಗಳು. (ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

4. ಹ. ಮುಆದ್ ಬಿನ್ ಅನಸ್(ರ) ವರದಿ ಮಾಡುತ್ತಾರೆ, ಪ್ರವಾದಿ(ಸ) ಹೇಳಿರುವರು- ಯಾರು ಅನ್ನ ಪಾನೀಯಗಳ ಸೇವನೆಯ ಬಳಿಕ ಈ ದುಆ ಪಠಿಸುತ್ತಾರೋ ಆತನ ಗತಪಾಪಗಳೆಲ್ಲವೂ ಕ್ಷಮಿಸಲ್ಪಡುವುದು.

اَلْحَمْدُ لِلّٰهِ الَّذِىْ اَطْعَمَنِىْ وَ رَزَقَنِيْهِ مِنْ غَيْرِ حَوْلٍ مِنِّىْ وَلاَ قُوَّةٍ۔

"ಅಲ್ ಹಮ್ದುಲ್ಲಿಲ್ಲಾಹಿಲ್ಲದೀ ಅತ್‌ಅಮನೀ ವರಝುಕನೀಹಿ ಮಿನ್ ಗೈರಿ ಹೌಲಿಮ್ಮಿನ್ನೀ ವಲಾ ಕುವ್ವತಿನ್"

ನನಗೆ ಈ ಆಹಾರವನ್ನು ಉಣಿಸಿದ, ಕುಡಿಸಿದ ಮತ್ತು ನನ್ನ ಪ್ರಯತ್ನ ಹಾಗೂ ಸಾಮರ್ಥ್ಯವಿಲ್ಲದಿದ್ದಾಗಲೂ ಅದನ್ನು ಕರುಣಿಸಿದ ಅಲ್ಲಾಹನಿಗೆ ಸರ್ವಸ್ತುತಿಗಳು.

5. ಹ. ಅನಸ್ ಬಿನ್ ಮಾಲಿಕ್‌ರಿಂದ(ರ) ವರದಿಯಾಗಿದೆ. ಒಂದು ದಿವಸ ಪ್ರವಾದಿಯವರು(ಸ) ಸಅದ್ ಬಿನ್ ಉಬಾದಾರ(ರ) ಮನೆಗೆ ಭೇಟಿ ನೀಡಿದರು.

ಪ್ರವಾದಿಯವರಿಗೆ(ಸ) ರೊಟ್ಟಿ ಮತ್ತು (ಇಪ್ಪೆ) ಎಣ್ಣೆ ಕೊಟ್ಟರು. ಊಟದ ಬಳಿಕ ಅವರು(ಸ) ಈ ರೀತಿ ಹೇಳಿದರು:

أَفْطَرَ عِنْدَكُمُ الصَّائِمُوْنَ وَ أَكَلَ طَعَامَكُمُ الْاَبْرَارُ وَ صَلَّتْ عَلَيْكُمُ الْمَلآئِكَةُ۔

"ಅಫ್ತರ ಇಂದಕುಮುಸ್ಸಾಇಮೂನ ವಅಕಲ ತಆಮಕುಮುಲ್ ಅಬ್‌ರಾರು ವಸಲ್ಲತ್ ಅಲೈಕುಮುಲ್ ಮಲಾಯಿಕತು"

ನಿಮ್ಮಲ್ಲಿ ಉಪವಾಸಿಗ ಪಾರಣೆ ಮಾಡಲಿ. ನಿಮ್ಮ ಭೋಜನ (ಸದಾ) ಸಜ್ಜನರು ಉಣ್ಣಲಿ. ನಿಮಗಾಗಿ ದೇವಚರರು ಪ್ರಾರ್ಥಿಸಲಿ. (ಅಬೂದಾವೂದ್)

## ತಹಜ್ಜುದ್, ನಿದ್ರಾಹೀನತೆ ಮತ್ತು ಕನಸು ಕಂಡಾಗ ಪಠಿಸುವ ದುಆಗಳು

1. ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುತ್ತಾರೆ, ಪ್ರವಾದಿಯವರು(ಸ) ರಾತ್ರಿ ವೇಳೆ ತಹಜ್ಜುದ್‌ಗಾಗಿ ಏಳುವಾಗ ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ لَكَ الْحَمْدُ اَنْتَ قَيِّمُ السَّمٰوٰتِ وَالْاَرْضِ وَ مَنْ فِيْهِنَّ، وَلَكَ الْحَمْدُ لَكَ مُلْكُ السَّمٰوٰتِ وَالْاَرْضِ وَ مَنْ فِيْهِنَّ، وَلَكَ الْحَمْدُ اَنْتَ نُوْرُ السَّمٰوٰتِ وَالْاَرْضِ وَ مَنْ فِيْهِنَّ، وَلَكَ الْحَمْدُ اَنْتَ الْحَقُّ، وَوَعْدُكَ الْحَقُّ، وَلِقَاؤُكَ حَقٌّ، وَ قَوْلُكَ حَقٌّ، وَالْجَنَّةُ حَقٌّ، وَالنَّارُ حَقٌّ، وَالنَّبِيُّوْنَ حَقٌّ، وَ مُحَمَّدٌ ﷺ حَقٌّ، وَالسَّاعَةُ حَقٌّ، اَللّٰهُمَّ لَكَ اَسْلَمْتُ وَ بِكَ آمَنْتُ، وَعَلَيْكَ تَوَكَّلْتُ، وَاِلَيْكَ اَنَبْتُ وَاِلَيْكَ حَاكَمْتُ، فَاغْفِرْلِيْ مَا قَدَّمْتُ وَمَا اَخَّرْتُ، وَمَا اَسْرَرْتُ، وَبِكَ خَاصَمْتُ وَمَا اَعْلَنْتُ وَمَا اَنْتَ اَعْلَمُ بِهٖ مِنِّيْ، اَنْتَ الْمُقَدِّمُ وَ اَنْتَ الْمُؤَخِّرُ، لاَ اِلٰهَ اِلَّا اَنْتَ وَلاَ حَوْلَ وَلاَ قُوَّةَ اِلَّا بِاللّٰهِ۔

"ಅಲ್ಲಾಹುಮ್ಮ ಲಕಲ್ ಹಮ್ದು ಅಂತ ಕಯ್ಯಿಮುಸ್ಸಮಾವಾತಿ ವಲ್ ಅರ್ದಿ ವಮನ್ ಫೀಹಿನ್ನ, ವಲಕಲ್ ಹಮ್ದು ಲಕ ಮುಲ್ಕುಸ್ಸಮಾವಾತಿ ವಲ್ ಅರ್ದಿ ವಮನ್ ಫೀ ಹಿನ್ನ, ವಲಕಲ್ ಹಮ್ದು ಅಂತ ನೂರುಸ್ಸಮಾವಾತಿ ವಲ್ ಅರ್ದಿ ವಮನ್ ಫೀ ಹಿನ್ನ, ವಲಕಲ್ ಹಮ್ದು ಅಂತಲ್ ಹಕ್ಕ್, ವವಅ್‌ದುಕಲ್ ಹಕ್ಕ್, ವಲಿಕಾಉಕ ಹಕ್ಕ್, ವಕೌಲುಕ ಹಕ್ಕ್, ವಲ್‌ಜನ್ನತು ಹಕ್ಕ್, ವನ್ನಾರು ಹಕ್ಕ್, ವನ್ನಬಿಯ್ಯೂನ ಹಕ್ಕ್, ಅಲ್ಲಾಹುಮ್ಮ ಲಕ ಅಸ್‌ಲಮ್ತು ವಬಿಕ ಆಮನ್ತು, ವಅಲೈಕ ತವಕ್ಕಲ್ತು ವ ಇಲೈಕ ಅನಬ್ತು ವ ಇಲೈಕ ಹಾಕಮ್‌ತು, ಫಗ್‌ಫಿರ್ಲೀ ಮಾಕದ್ದಮ್‌ತು ವಮಾಅಖ್ಖರ್‌ತು, ವಮಾ ಅಸ್‌ರರ್‌ತು, ವಬಿಕ ಖಾಸಮ್‌ತು ವಮಾ ಅಲ್‌ಲನ್ತು ವಮಾ ಅಂತ ಅ ಅ್‌ಲಮು ಬಿಹೀ ಮಿನ್ನಿ ಅಂತಲ್ ಮುಕದ್ದಿಮು ವ ಅಂತಲ್ ಮುಅಖ್ಖಿರು, ಲಾ ಇಲಾಹ ಇಲ್ಲಾ ಅಂತ ವಲಾ ಹೌಲ ವಲಾ ಖುವ್ವತ ಇಲ್ಲಾ ಬಿಲ್ಲಾಹಿ"

ಓ ಅಲ್ಲಾಹ್! ಸಕಲ ಸ್ತುತಿಸ್ತೋತ್ರಗಳು ನಿನಗಾಗಿವೆ. ಭೂಮಿ, ಆಕಾಶಗಳಲ್ಲಿ ಮತ್ತು ಅವುಗಳಲ್ಲಿರುವುದೆಲ್ಲದರ ವ್ಯವಸ್ಥೆ ನಡೆಸುವವನು ನೀನೆ. ಪ್ರಶಂಸೆಗಳೆಲ್ಲವೂ ಕೇವಲ ನಿನಗಾಗಿವೆ. ಭೂಮಿ-ಆಕಾಶಗಳು ಮತ್ತದರ ಮಧ್ಯೆಯಲ್ಲಿರುವ ಸಕಲ ಸೃಷ್ಟಿಗಳ ಮೇಲೆ ನಿನ್ನ ಪ್ರಭುತ್ವವಿದೆ. ಸ್ತುತಿಸ್ತೋತ್ರಗಳಿಗೆ ನೀನೇ ಅರ್ಹ. ಭೂಮಿ-ಆಕಾಶಗಳು ಮತ್ತು ಅವುಗಳ ಮಧ್ಯೆ ಇರುವಂತಹವುಗಳೆಲ್ಲದರ ಪ್ರಕಾಶವೂ ನಿನ್ನದು. ಸ್ತುತಿಸ್ತೋತ್ರಗಳೂ ನಿನಗಾಗಿವೆ. ನೀನೇ ಸತ್ಯ. ನಿನ್ನ ವಾಗ್ದಾನ, ನಿನ್ನ ದರ್ಶನ, ನಿನ್ನ ಮಾತು, ಸ್ವರ್ಗ-ನರಕವೂ ಸತ್ಯ. ಪ್ರವಾದಿಯೂ ಮುಹಮ್ಮದ್‌ರೂ(ಸ) ಸತ್ಯವಾಗಿರುತ್ತಾರೆ. ಪರಲೋಕ ಸಂಭವಿಸು ವುದೂ ಸತ್ಯ. ಓ ಅಲ್ಲಾಹ್! ನಾನು ನಿನ್ನನ್ನು ಅನುಸರಿಸಿದೆ. ನಿನ್ನಲ್ಲಿ ವಿಶ್ವಾಸವಿರಿಸಿದೆ. ನಿನ್ನ ಮೇಲೆಯೇ ಭರವಸೆಯನ್ನಿರಿಸಿದೆ. ನನ್ನ ಮನಸ್ಸನ್ನು ನಿನ್ನ ಕಡೆಗೆ ಕೇಂದ್ರೀಕರಿಸಿದೆ. ನಿನಗಾಗಿಯೇ ನಾನು ಸಂಭಾಷಣೆ ನಡೆಸಿದೆ. ನಿನ್ನ ಬಳಿಯೇ ತೀರ್ಮಾನಕ್ಕಾಗಿ ಬಂದಿರುವೆ. ನನ್ನ ಹಿಂದಿನ-ಮುಂದಿನ ಪಾಪಗಳನ್ನು ಕ್ಷಮಿಸು. ಅರಿತೋ ಅರಿಯದೆಯೋ ಸಂಭವಿಸಿದ ತಪ್ಪುಗಳನ್ನು ಕ್ಷಮಿಸು. ಅದರ ಕುರಿತು ನಿನ್ನ ಜ್ಞಾನವು ನನಗಿಂತಲೂ ಅಗಾಧವಾಗಿದೆ. ಆದಿಯೂ ಅನಾದಿಯೂ ನೀನೇ. ನೀನಲ್ಲದೇ ಅನ್ಯ ಆರಾಧ್ಯರಿಲ್ಲ. ಪಾಪಗಳಿಂದ ರಕ್ಷಿಸುವವನೂ ಸತ್ಕರ್ಮಗಳನ್ನೆಸಗಲು ಸೌಭಾಗ್ಯ ನೀಡುವವನೂ ಆಗಿರುವ ಅಲ್ಲಾಹನೇ ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ.

2. ಹ. ಅಬೂ ಸಈದ್ ಖುದ್ರಿ(ರ) ಹೇಳುತ್ತಾರೆ: ಪ್ರವಾದಿ(ಸ) ಈ ರೀತಿ ಹೇಳುತ್ತಿರು ವುದನ್ನು ನಾನು ಕೇಳಿದ್ದೇನೆ- ನಿಮಗೆ ಇಷ್ಟವಾದ ಕನಸು ಕಂಡರೆ ಅದು ಅಲ್ಲಾಹನ ಕಡೆಯಿಂದಾಗಿರುತ್ತದೆ. ಅದಕ್ಕಾಗಿ ಅಲ್ಲಾಹನನ್ನು ಸ್ತುತಿಸಿರಿ ಮತ್ತು ಜನರಲ್ಲಿ ಅದರ ಬಗ್ಗೆ ಪ್ರಸ್ತಾಪಿಸಿರಿ. ಕೆಟ್ಟ ಕನಸು ಶೈತಾನನ ಚಂಚಲತೆಯಿಂದಾಗಿರುತ್ತದೆ. ಅದಕ್ಕಾಗಿ ಅಲ್ಲಾಹನಲ್ಲಿ ಅಭಯ ಯಾಚಿಸಿರಿ. ಮತ್ತು ಯಾರಲ್ಲೂ ಅದರ ಪ್ರಸ್ತಾಪ ಮಾಡದಿರಿ. ಏಕೆಂದರೆ ಅಂತಹ ಕನಸು ಯಾವುದೇ ನಷ್ಟವನ್ನುಂಟು ಮಾಡದು.

3. ಹ. ಅಮ್ರ್ ಬಿನ್ ಶೈಬ(ರ) ತನ್ನ ತಂದೆ ಮತ್ತು ತಾತರಿಂದ ವರದಿ ಮಾಡಿದ್ದಾರೆ. ಪ್ರವಾದಿ(ಸ) ಹೇಳಿದರು- ನಿದ್ರೆಯಲ್ಲಿ ಯಾರಾದರೂ ಭಯಭೀತರಾದರೆ ಆತ ಈ ಪದಗಳಲ್ಲಿ ಪ್ರಾರ್ಥಿಸಲಿ:-

اَعُوْذُ بِكَلِمَاتِ اللّٰهِ التَّآمَّاتِ مِنْ غَضَبِهٖ وَ عِقَابِهٖ وَ شَرِّ عِبَادِهٖ
وَمِنْ هَمَزَاتِ الشَّيَاطِيْنَ وَ أَنْ يَحْضُرُوْنَ۔

"ಅಊದು ಬಿಕಲಿಮಾತಿಲ್ಲಾಹಿತ್ತಾಮ್ಮಾತಿ ಮಿನ್ ಗದಬಿಹಿ ವ ಇಕಾಬಿಹೀ ವ ಶರ್ರಿ ಇಬಾದಿಹೀ ವಮಿನ್ ಹಮಝಾತಿ ಶ್ಯಯಾತೀನ ವಅನ್‌ಯಹ್‌ದುರೂನ್"

ಅಲ್ಲಾಹನ ಸಕಲ ವಚನಗಳ ಮೂಲಕ ನಾನು ಅಭಯ ಯಾಚಿಸುತ್ತೇನೆ. ಆತನ ಕೋಪ ತಾಪಗಳಿಂದ, ಅವನ ಶಿಕ್ಷೆಯಿಂದ ಹಾಗೂ ಅವನ ದಾಸರ ಕೇಡಿನಿಂದ, ಶೈತಾನನ ದುಷ್ಪ್ರೇರಣೆಯಿಂದ ಮತ್ತು ಅವರು ನನ್ನ ಬಳಿ ಸುಳಿಯುವುದರಿಂದ.

(ಅಬೂದಾವೂದ್, ನಸಾಈ, ತಿರ್ಮಿದಿ)

ಈ ದುಆದ ಅನುಗ್ರಹದಿಂದ ಆತನಿಗೆ ಯಾವ ಕೇಡೂ ಉಂಟಾಗದು ಮತ್ತು ಎಲ್ಲಾ ರೀತಿಯ ಆಪತ್ತುಗಳಿಂದ ಸುರಕ್ಷಿತನಾಗುವನು.

## ನಿದ್ರಾಹೀನತೆ ಉಂಟಾದರೆ ಪಠಿಸುವ ದುಆ

ಹ. ಖಾಲಿದ್ ಬಿನ್ ವಲೀದ್(ರ) ನಿದ್ರಾಭಂಗವಾದ ಬಗ್ಗೆ ಪ್ರವಾದಿವರ್ಯರಲ್ಲಿ(ಸ) ನಿವೇದಿಸಿಕೊಂಡಾಗ ಅವರು(ಸ) ಹೇಳಿದರು- ನಾನು ನಿಮಗೆ ಕೆಲವು ವಚನಗಳನ್ನು ಹೇಳಿಕೊಡಲೇ? ಅದರಿಂದ ನಿಮಗೆ ನಿದ್ರೆಯುಂಟಾಗುವುದು.

اَللّٰهُمَّ رَبَّ السَّمٰوٰتِ السَّبْعِ وَمَا اَظَلَّتْ وَ رَبَّ الْاَرْضِيْنَ
وَمَا أَقَلَّتْ وَ رَبَّ الشَّيَاطِيْنَ وَمَا اَضَلَّتْ كُنْ لِيْ جَارًا مِنْ
شَرِّ خَلْقِكَ اَجْمَعِيْنَ اَنْ يَفْرُطَ عَلَيَّ اَحَدٌ مِّنْهُمْ اَوْ اَنْ
يَطْغٰى، عَزَّ جَارُكَ وَ تَبَارَكَ اسْمُكَ۔

"ಅಲ್ಲಾಹುಮ್ಮ ರಬ್ಬಸ್ಸಮಾವಾತಿಸ್ಸಬ್‌ಇ ವಮಾ ಅದಲ್ಲತ್ ವ ರಬ್ಬಲ್ ಅರ್ದೀನ ವಮಾ ಅಕಲ್ಲತ್ ವರಬ್ಬಶ್ಶಯಾತೀನ ವಮಾ ಅದಲ್ಲತ್ ಕುನ್ ಲೀ ಜಾರನ್ ಮಿನ್ ಶರ್ರಿ ಖಲ್ಕಿಕ ಅಜ್ಮ್‌ಈನ ಅನ್‌ಯಫ್‌ರುತ ಅಲಯ್ಯ ಅಹದುಮ್ಮಿನ್‌ಹುಮ್ ಅವ್ ಅನ್‌ಯತ್‌ಗಾ, ಅಝ್ಝ ಜಾರುಕ ವ ತಬಾರಕಸ್‌ಮುಕ"

ಓ ಅಲ್ಲಾಹ್! ಸಪ್ತ ಗಗನಗಳ ಮತ್ತು ಅವುಗಳ ನೆರಳಲ್ಲಿರುವುದರ ಪ್ರಭುವೇ, ಭೂಮಿ ಮತ್ತು ಅದರ ಆಶ್ರಯದಲ್ಲಿರುವುದರ ಪ್ರಭುವೇ, ಶೈತಾನರ ಮತ್ತು ಅವುಗಳು

ಪಥಭ್ರಷ್ಟಗೊಳಿಸಿದವುಗಳ ಪ್ರಭುವೇ, ನೀನು ನಿನ್ನ ಸಕಲ ಸೃಷ್ಟಿಗಳ ಕೇಡಿನಿಂದ ರಕ್ಷಿಸು ಮತ್ತು ಅವುಗಳಲ್ಲಿ ಯಾವುದೂ ನನ್ನನ್ನು ಅದರ ಹತೋಟಿಯಲ್ಲಿರಿಸದಿರಲಿ ಅಥವಾ ನನ್ನ ಮೇಲೆ ಅತಿರೇಕವೆಸಗದಿರಲಿ. ನಾನು ನಿನ್ನ ಅಭಯ ಗಳಿಸಿದ ಬಳಿಕ ಪುನಃ ಯಾವುದೇ ರೀತಿಯ ಭಯ ಮತ್ತು ಅಪಾಯವಿರದು. ನಿನ್ನ ಅಭಯ ಮಹೋನ್ನತವಾದುದು ಹಾಗೂ ನಿನ್ನ ನಾಮವು ಸಮೃದ್ಧವಾದುದು.

ಹ. ಖಾಲಿದ್ ಬಿನ್ ವಲೀದ್(ರ) ಈ ವಚನಗಳನ್ನು ಜಪಿಸಿದಾಗಲೆಲ್ಲ ತಕ್ಷಣ ಅವರಿಗೆ ನಿದ್ರೆ ಬರುತ್ತಿತ್ತು.

ಹ. ಝೈದ್ ಬಿನ್ ಸಾಬಿತ್(ರ) ಹೇಳುತ್ತಾರೆ. ನಾನು ಒಮ್ಮೆ ಪ್ರವಾದಿಯವರೊಂದಿಗೆ(ಸ) ನಿದ್ರಾಹೀನತೆಯ ಬಗ್ಗೆ ದೂರಿಕೊಂಡಾಗ ಅವರು(ಸ) ಈ ದುಆ ಪಠಿಸಲು ಹೇಳಿದರು:

اَللّٰهُمَّ غَارَتِ النُّجُوْمُ، وَهَدَأَتِ الْعُيُوْنُ وَ اَنْتَ حَيٌّ قَيُّوْمٌ، لاَ تَاْخُذُكَ سِنَةٌ وَّلاَ نَوْمٌ، يَا حَيُّ يَا قَيُّوْمُ، اِهْدِ لَيْلِىْ، وَاَنِمْ عَيْنِىْ.

"ಅಲ್ಲಾಹುಮ್ಮ ಗಾರತಿನ್ನುಜೂಮು, ವಹದ ಅತಿಲ್ ಉಯೂನು ವ ಅಂತ ಹಯ್ಯುನ್ ಕಯ್ಯೂಮ್, ಲಾ ತಅ್‌ಕುದುಕ ಸಿನತುಂ, ವಲಾನೌಮ್, ಯಾ ಹಯ್ಯು ಯಾ ಕಯ್ಯೂಮ್ ಇಹ್ದಿ ಲೈಲೀ, ವ ಅನಿಮ್ ಐನೀ"

ಓ ಅಲ್ಲಾಹ್! ನಕ್ಷತ್ರಗಳು ಮುಳುಗಿ ಹೋದವು, ರಾತ್ರಿ ಎಚ್ಚೆತ್ತು ಕಳೆಯಿತು. ನೀನೇ ಚಿರಂತನನು, ಸ್ವಯಂ ಜೀವಂತನು. ನಿನಗೆ ತೂಕಡಿಕೆಯಾಗಲೀ ನಿದ್ರೆಯಾಗಲೀ ಬಾಧಿಸುವುದಿಲ್ಲ. ಓ ಚಿರಂತನ, ಜೀವಂತನೇ, ನನ್ನ ರಾತ್ರಿಯನ್ನು ಸುಗಮವಾಗಿ ಮರೆಮಾಚು ಮತ್ತು ನನ್ನ ಕಣ್ಣುಗಳಿಗೆ ನಿದ್ರೆ ಬರಿಸು. (ಇಬ್ನು ಸುನ್ನಿ)

ಈ ದುವಾ ಪಠಿಸಿದ ತಕ್ಷಣ ಅಲ್ಲಾಹನು ನನ್ನ ನಿದ್ರಾಹೀನತೆಯ ವ್ಯಾಕುಲತೆಯನ್ನು ನೀಗಿಸಿದನು.

## ಮಲಗುವ ಮೊದಲು ಹೇಳುವ ದುಆ

1. ಅಬೂಹುರೈರಾ(ರ) - ಪ್ರವಾದಿಯವರಿಂದ(ಸ) ಉಲ್ಲೇಖಿಸುತ್ತಾರೆ. ಅವರು(ಸ) ಹೇಳಿದರು: ನಿಮ್ಮಲ್ಲಿ ಯಾರಾದರೂ ಮಲಗಲು ಹಾಸಿಗೆಗೆ ಹೋದರೆ ಆತ ಮೊತ್ತ ಮೊದಲು ಅದನ್ನು ಸ್ವಚ್ಛಗೊಳಿಸಲಿ. ಬಳಿಕ ಈ ರೀತಿ ಪಠಿಸಲಿ.

بِاسْمِكَ رَبِّىْ وَضَعْتُ جَنْبِىْ وَبِكَ اَرْفَعُهٗ اِنْ اَمْسَكْتَ نَفْسِىْ فَاغْفِرْلَهَا، وَ اِنْ اَرْسَلْتَهَا فَاحْفَظْهَا بِمَا تَحْفَظُ بِهٖ عِبَادَكَ الصَّالِحِيْنَ.

"ಬಿಸ್ಮಿಕ ರಬ್ಬೀ ವದಅ್‌ತು ಜಂಬೀ, ವಬಿಕ ಅರ್ಫಉಹು, ಇನ್ ಅಮ್‌ಸಕ್‌ತ ನಫ್ಸೀ ಫಗ್‌ಫಿರ್ಲಹಾ, ವ ಇನ್ ಅರ್ಸಲ್ತಹಾ ಫಹ್ ಫಝ್‌ಹಾ ಬಿಮಾ ತಹ್ ಫಝು ಬಿಹೀ ಇಬಾದಕಸ್ಸಾಲಿಹೀನ್"

ಓ ನನ್ನ ಪ್ರಭೂ! ನಿನ್ನ ನಾಮದೊಂದಿಗೆ ನಾನು ನನ್ನ ಪಾರ್ಶ್ವವನ್ನು ಹಾಸಿಗೆಯ ಮೇಲಿಡುತ್ತೇನೆ ಮತ್ತು ನಿನ್ನ ನಾಮದಿಂದಲೇ ಅದನ್ನು ಹಾಸಿಗೆಯಿಂದ ಎತ್ತುವೆನು. ನಿದ್ರಾವಸ್ಥೆಯಲ್ಲೇ ನನ್ನ ಪ್ರಾಣ ಹೊರಟು ಹೋದರೆ ನನ್ನನ್ನು ಕ್ಷಮಿಸು ಮತ್ತು ನನ್ನ ಆತ್ಮವನ್ನು ಮರಳಿ ಪುನಃ ಕೊಟ್ಟು ಬಿಡುವುದಾದರೆ ಅದನ್ನು ಸಜ್ಜನ ದಾಸರನ್ನು ರಕ್ಷಿಸುವಂತೆ ರಕ್ಷಿಸು. (ಅಲ್ ಜಾಮಿಅ್:)

2. ಉಮ್ಮುಲ್ ಮೂಮಿನೀನ್ ಹ. ಆಯಿಶಾ(ರ) ವಿವರಿಸುತ್ತಾರೆ. ರಾತ್ರಿ ವೇಳೆ ವಿಶ್ರಾಂತಿಯ ಅವಶ್ಯಕತೆಗಾಗಿ ಪ್ರವಾದಿ(ಸ) ಹಾಸಿಗೆಗೆ ಹೋಗುವಾಗ ಸೂರ ಇಖ್ಲಾಸ್, ಸೂರ ಫಲಕ್, ಸೂರ ಅನ್ನಾಸ್ ಅಧ್ಯಾಯಗಳನ್ನು ಓದಿ ಎರಡೂ ಅಂಗೈಗಳನ್ನು ದುಆ ಮಾಡುವಂತೆ ಜೋಡಿಸಿ ಅಂಗೈಗಳಿಗೆ ಊದಿ ತಮ್ಮ ತಲೆ, ಮುಖ ಮತ್ತು ಶರೀರದ ಮುಂಭಾಗದಿಂದ ಆರಂಭಿಸಿ ಶರೀರದ ಮೇಲೆ ಕೈ ತಲಪುವಲ್ಲಿಗೆಲ್ಲಾ ಅದನ್ನು ಸವರುತ್ತಿದ್ದರು. ಪ್ರವಾದಿ(ಸ) ಹೀಗೆ ಮೂರು ಸಲ ಮಾಡುತ್ತಿದ್ದರು. (ಬುಖಾರಿ)

3. ಅಬೂ ಸಈದ್ ಖುದ್ರಿ(ರ) ವರದಿ ಮಾಡುತ್ತಾರೆ- ಪ್ರವಾದಿ(ಸ) ಹೇಳಿರುವರು: ಯಾರು ಹಾಸಿಗೆಯಲ್ಲಿ ಮಲಗುವಾಗ ಮೂರು ಸಲ ಈ ದುಆ ಮಾಡುತ್ತಾನೋ ಅಲ್ಲಾಹ್ ಆತನ ಎಲ್ಲ ಪಾಪಗಳನ್ನು ಕ್ಷಮಿಸುವನು. ಅದು ಸಮುದ್ರದ ನೊರೆಗಳಷ್ಟಿರಲಿ, ವೃಕ್ಷಗಳ ಎಲೆಗಳಷ್ಟು ಸಂಖ್ಯೆಯಲ್ಲಿರಲಿ, ಮರಳ ಕಣಗಳಷ್ಟಿರಲಿ ಅಥವಾ ವಿಶ್ವವು ಅಸ್ತಿತ್ವದಲ್ಲಿರುವಷ್ಟು ದಿನಗಳ ಸಂಖ್ಯೆಯಷ್ಟೇ ಇರಲಿ.

اَسْتَغْفِرُ اللّٰهَ الَّذِىْ لَآ اِلٰـهَ اِلَّا هُوَ، اَلْحَىُّ الْقَيُّوْمُ وَ اَتُوْبُ اِلَيْهِ۔

"ಅಸ್ತಗ್‌ಫಿರುಲ್ಲಾಹಲ್ಲದೀ ಲಾ ಇಲಾಹ ಇಲ್ಲಾ ಹುವ, ಅಲ್ ಹಯ್ಯುಲ್ ಕಯ್ಯೂಮು ವ ಅತೂಬು ಇಲೈಹಿ"

ಏಕೈಕನೂ ಚಿರಂತನನೂ ಅಖಿಲ ಪ್ರಪಂಚದ ನಿಯಂತ್ರಕನೂ ಆದ ಅಲ್ಲಾಹನಲ್ಲಿ ನಾನು ಕ್ಷಮೆ ಯಾಚಿಸುತ್ತೇನೆ ಮತ್ತು ಆತನ ಕಡೆಗೇ ಪಶ್ಚಾತ್ತಾಪಪಟ್ಟು ಮರಳುತ್ತೇನೆ." (ತಿರ್ಮಿದಿ)

4. ಹ. ಅಬೂಹುರೈರಾರಿಂದ(ರ) ವರದಿಯಾಗಿದೆ. ಪ್ರವಾದಿ(ಸ) ಹೇಳಿದರು 'ಯಾರು ಹಾಸಿಗೆಗೆ ಹೋಗುವಾಗ ಈ ದುಆವನ್ನು ಪಠಿಸುತ್ತಾನೋ ಆತನ ಸಕಲ ಪಾಪಗಳು ಕ್ಷಮಿಸಲ್ಪಡುವುವು. ಅದು ಸಮುದ್ರದ ನೊರೆಗಳಷ್ಟಿದ್ದರೂ ಸರಿ.

لَآ اِلٰـهَ اِلَّا اللّٰهُ وَحْدَهُ لاَ شَرِيْكَ لَهُ، لَهُ الْمُلْكُ وَلَهُ الْحَمْدُ وَهُوَ عَلٰى كُلِّ شَيْءٍ قَدِيْرٌ، لاَحَوْلَ وَلاَ قُوَّةَ اِلَّا بِاللّٰهِ الْعَلِيِّ الْعَظِيْمِ سُبْحَانَ اللّٰهِ وَالْحَمْدُ لِلّٰهِ، وَلاَ اِلٰـهَ اِلَّا اللّٰهُ وَاللّٰهُ اَكْبَرُ۔

"ಲಾ ಇಲಾಹ ಇಲ್ಲಲ್ಲಾಹು ವಹ್ದಹೂ ಲಾ ಶರೀಕ ಲಹೂ, ಲಹುಲ್ ಮುಲ್ಕು ವಲಹುಲ್ ಹಮ್ದು ವ ಹುವ ಅಲಾ ಕುಲ್ಲಿ ಶೈಇನ್ ಕದೀರ್, ಲಾ ಹೌಲವಲಾ ಕುವ್ವತ ಇಲ್ಲಾ ಬಿಲ್ಲಾಹಿಲ್ ಅಲಿಯ್ಯಿಲ್ ಅಝೀಮಿ ಸುಬ್ಹಾನಲ್ಲಾಹಿ ವಲ್ ಹಮ್ದುಲಿಲ್ಲಾಹಿ, ವಲಾ ಇಲಾಹ ಇಲ್ಲಲ್ಲಾಹು ವಲ್ಲಾಹು ಅಕ್ಬರ್"

ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಏಕೈಕನು, ಅವನಿಗಾರೂ ಸಹಭಾಗಿಗಳಿಲ್ಲ. ಸ್ತುತಿ ಮತ್ತು ಆಧಿಪತ್ಯ ಅವನಿಗೇ ಸೇರಿದೆ. ಅವನು ಎಲ್ಲ ಕಾರ್ಯಗಳಲ್ಲಿ ಸರ್ವ ಸಮರ್ಥನಾಗಿರುವನು. ಆತನ ಸಹಾಯವಲ್ಲದೇ ಮತ್ತ್ಯಾರಿಗೂ ಶಕ್ತಿ ಸಾಮರ್ಥ್ಯವಿಲ್ಲ. ಅಲ್ಲಾಹನೇ ನೀನು ಪರಿಶುದ್ಧನಾಗಿರುವಿ. ಸ್ತುತಿಸ್ತೋತ್ರಗಳೂ ನಿನಗಾಗಿವೆ. ಮಹೋನ್ನತನಾದ ಅಲ್ಲಾಹನೇ! ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. (ಇಬ್ನು ಹಿಬ್ಬಾನ್)

5. ಹ. ಬರಾಅ್ ಬಿನ್ ಆಝಿಬ್(ರ) ವರದಿ ಮಾಡುತ್ತಾರೆ- ಪ್ರವಾದಿ(ಸ) ಹೇಳಿದ್ದಾರೆ- ನೀವು ವುಝೂ ಮಾಡಿಕೊಂಡು ಮಲಗಲು ಹಾಸಿಗೆಗೆ ಹೋಗಿ ಬಲ ಮಗ್ಗುಲಿಗೆ ಮಲಗಿರಿ ಮತ್ತು ಈ ರೀತಿ ಪ್ರಾರ್ಥಿಸಿರಿ. ಆ ಬಳಿಕ ಯಾವುದೇ ಮಾತನ್ನಾಡದಿರಿ. ಒಂದು ವೇಳೆ ಅದೇ ರಾತ್ರಿ ನೀವು ಮರಣ ಹೊಂದಿದರೆ ನಿಮ್ಮ ಮರಣ ನೈಜ ಪ್ರಕೃತಿ ಯಲ್ಲಾಯಿತು ಅರ್ಥಾತ್ ಇಸ್ಲಾಮಿನಲ್ಲಿ.

اَللّٰهُمَّ اَسْلَمْتُ وَجْهِىْ اِلَيْكَ وَ فَوَّضْتُ اَمْرِىْ اِلَيْكَ، وَاَلْجَأْتُ ظَهْرِىْ اِلَيْكَ رَغْبَةً وَرَهْبَةً اِلَيْكَ، لاَ مَلْجَأَ وَلاَ مَنْجٰى مِنْكَ اِلَّا اِلَيْكَ، اٰمَنْتُ بِكِتَابِكَ الَّذِىْ اَنْزَلْتَ وَ نَبِيِّكَ الَّذِىْ اَرْسَلْتَ۔

"ಅಲ್ಲಾಹುಮ್ಮ ಅಸ್ಲಮ್ತು ವಜ್‌ಹೀ ಇಲೈಕ ವ ಫವ್ವದ್‌ತು ಅಮ್ರೀ ಇಲೈಕ, ವಅಲ್‌ಜಲ್‌ತು ಝುಹ್‌ರೀ ಇಲೈಕ ರಗ್‌ಬತನ್ ವರಹ್‌ಬತನ್ ಇಲೈಕ, ಲಾಮಲ್‌ಜಅ ವಲಾ ಮಂಜಅ ಮಿಂಕ ಇಲ್ಲಾ ಇಲೈಕ, ಆಮನ್ತು ಬಿಕಿತಾಬಿಕಲ್ಲದೀ ಅಂಝಲ್ತ ವನಬಿಯ್ಯಿಕಲ್ಲದೀ ಅರ್‌ಸಲ್ತ"

ಓ ಅಲ್ಲಾಹ್! ನಾನು ನನ್ನ ಮುಖವನ್ನು ನಿನ್ನೆಡೆಗೆ ತಿರುಗಿಸಿದೆ. ನನ್ನ ಕಾರ್ಯ ಗಳನ್ನು ನಿನ್ನ ವಶಕ್ಕೊಪ್ಪಿಸಿದೆ ಮತ್ತು ನಿನ್ನನ್ನೇ ಸಹಾಯಕನನ್ನಾಗಿಸಿದೆ. ನಿನ್ನೆಡೆಗೆ ಆಗ್ರಹ ಚಿತ್ತನಾಗಿದ್ದೇನೆ ಮತ್ತು ನಿನ್ನ ಭಯದಿಂದ ಕಂಪಿಸುತ್ತಿದ್ದೇನೆ. ನೀನಲ್ಲದೇ ಮತ್ತ್ಯಾರಿಂದಲೂ ಆಶ್ರಯ ಮತ್ತು ಮೋಕ್ಷ ಸಿಗಲಾರದು. ನೀನು ಅವತೀರ್ಣಗೊಳಿಸಿದ ಗ್ರಂಥಗಳಲ್ಲೂ ನೀನು ಕಳುಹಿಸಿದ ಪ್ರವಾದಿಗಳಲ್ಲೂ ವಿಶ್ವಾಸವಿರಿಸಿದೆ.

## ನಮಾಝ್ ಮತ್ತು ಸಭೆಯ ಬಳಿಕ ದುಆ

1. ಹ. ಅಬೂಹುರೈರಾರ(ರ) ವರದಿ: ಪ್ರವಾದಿ(ಸ) ಹೇಳಿರುವರು: ಒಬ್ಬನು ಪ್ರತಿ ನಮಾಝ್‌ನ ಬಳಿಕ 33 ಸಲ ಸುಬ್‌ಹಾನಲ್ಲಾಹ್, 33 ಸಲ ಅಲ್ ಹಮ್ದುಲ್ಲಿಲ್ಲಾಹ್ ಮತ್ತು 33 ಸಲ ಅಲ್ಲಾಹು ಅಕ್ಬರ್ ಹಾಗೂ ನೂರರ ಸಂಖ್ಯೆ ಪೂರ್ತಿಗೊಳಿಸಲು ಈ ವಚನವನ್ನು ಒಂದು ಸಲ ಹೇಳಿದರೆ ಅವನ ಪಾಪಗಳು ಸಮುದ್ರದ ನೊರೆಗಳಷ್ಟಿದ್ದರೂ ಅಲ್ಲಾಹ್ ಆತನನ್ನು ಕ್ಷಮಿಸುವನು.

لَآ اِلٰهَ اِلَّا اللّٰهُ وَحْدَهٗ لَا شَرِيْكَ لَهٗ لَهُ الْمُلْكُ وَلَهُ الْحَمْدُ
وَهُوَ عَلٰى كُلِّ شَيْءٍ قَدِيْرٌ۔

"ಲಾ ಇಲಾಹ ಇಲ್ಲಲ್ಲಾಹು ವಹ್ದಹೂ ಲಾ ಶರೀಕ ಲಹೂ ಲಹುಲ್ ಮುಲ್ಕು ವಲಹುಲ್ ಹಮ್ದು ವಹುವ ಅಲಾ ಕುಲ್ಲಿ ಶೈಇನ್ ಕದೀರ್"

ಅಲ್ಲಾಹನಲ್ಲದೆ ಬೇರೆ ಆರಾಧ್ಯರಿಲ್ಲ. ಅವನಿಗೆ ಯಾರೂ ಪಾಲುದಾರರೂ ಇಲ್ಲ. ಆತನದೇ ಪ್ರಭುತ್ವ, ಆತನಿಗೆ ಪ್ರಶಂಸೆಗಳು ಮತ್ತು ಆತ ಎಲ್ಲ ವಿಷಯ ಮೇಲೆ ಸಾಮರ್ಥ್ಯವುಳ್ಳವನು. (ಮುಸ್ಲಿಮ್)

2. ಹ. ಮುಆದ್ ಬಿನ್ ಜಬಲ್(ರ) ಹೇಳುತ್ತಾರೆ- ಪ್ರವಾದಿ(ಸ) ನನ್ನ ಕೈ ಹಿಡಿದು ಹೇಳಿದರು- ಮುಆದ್ ಅಲ್ಲಾಹನಾಣೆ! ನಾನು ನಿನ್ನನ್ನು ಪ್ರೀತಿಸುತ್ತೇನೆ. ನಮಾಝ್‌ನ ಬಳಿಕ ಎಂದೆಂದೂ ಈ ವಚನಗಳನ್ನು ಬಿಟ್ಟು ಬಿಡಬಾರದೆಂದು ನಿನಗೆ ಉಪದೇಶಿಸುತ್ತೇನೆ.

اَللّٰهُمَّ اَعِنِّیْ عَلٰى ذِكْرِكَ وَشُكْرِكَ، وَ حُسْنِ عِبَادَتِكَ۔

"ಅಲ್ಲಾಹುಮ್ಮ ಅಇನ್ನೀ ಅಲಾ ದಿಕ್ರಿಕ ವಶುಕ್ರಿಕ, ವಹುಸ್ನಿ ಇಬಾದತಿಕ"

ಓ ಅಲ್ಲಾಹ್! ನಿನ್ನನ್ನು ಸ್ಮರಿಸಲು, ನಿನಗೆ ಕೃತಜ್ಞತೆ ಸಲ್ಲಿಸಲು ನನಗೆ ನೆರವಾಗು ಮತ್ತು ಅತ್ಯುತ್ತಮ ರೀತಿಯಲ್ಲಿ ಆರಾಧಿಸುವ ಸೌಭಾಗ್ಯ ನೀಡು. (ಅಬೂದಾವೂದ್)

3. ಹ. ಬರ್‌ಝೂರಿಂದ(ರ) ವರದಿ: ಪ್ರವಾದಿಯವರು(ಸ) ಯಾವುದಾದರೂ ಸಭೆಯಿಂದ ಎದ್ದೇಳುವಾಗ ಈ ದುಆವನ್ನು ತಪ್ಪದೇ ಮಾಡುತ್ತಿದ್ದರು.

سُبْحَانَكَ اللّٰهُمَّ وَ بِحَمْدِكَ، اَشْهَدُ اَنْ لَّآ اِلٰهَ اِلَّآ اَنْتَ۔
اَسْتَغْفِرُكَ وَ اَتُوْبُ اِلَيْكَ۔

"ಸುಬ್ಹಾನಕ ಅಲ್ಲಾಹುಮ್ಮ ವಬಿಹಮ್ದಿಕ, ಅಶ್‌ಹದು ಅನ್ ಲಾ ಇಲಾಹ ಇಲ್ಲಾ ಅಂತ ಅಸ್ತಗ್‌ಫಿರುಕ ವ ಅತೂಬು ಇಲೈಕ"

ಓ ಅಲ್ಲಾಹ್! ನೀನು ಪರಮ ಪಾವನನು. ನಿನ್ನ ಸ್ತುತಿಸ್ತೋತ್ರಗಳೊಂದಿಗೆ ನಾನು ನಿನ್ನ ಸಾಕ್ಷ್ಯ ವಹಿಸುತ್ತೇನೆ. ನೀನಲ್ಲದೆ ಅನ್ಯ ಆರಾಧ್ಯರಿಲ್ಲ. ನಾನು ನಿನ್ನಲ್ಲಿ ಕ್ಷಮೆ ಯಾಚಿಸುತ್ತೇನೆ ಮತ್ತು ನಿನ್ನ ಕಡೆಗೇ ಪಶ್ಚಾತ್ತಾಪಪಟ್ಟು ಮರಳುತ್ತೇನೆ.

(ಅಬೂದಾವೂದ್, ಹಾಕಿಮ್)

ಓರ್ವ ವ್ಯಕ್ತಿ ನಿವೇದಿಸಿದರು- ಓ ಅಲ್ಲಾಹನ ಸಂದೇಶವಾಹಕರೇ, ತಾವು ಇದಕ್ಕಿಂತ ಮುಂಚೆ ಈ ದುಆ ಪಠಿಸಿರಲಿಲ್ಲ. ಅವರು(ಸ) ಹೇಳಿದರು- ಸಭೆಯಲ್ಲಿ ಏನಾದರೂ ಇಲ್ಲಸಲ್ಲದ ಮಾತುಗಳಾಗುತ್ತವೆ. ಈ ದುಆ ಅವುಗಳಿಗೆಲ್ಲ ಪ್ರಾಯಶ್ಚಿತ್ತವಾಗುವುದು.

4. ಹ. ಅಲಿ(ರ) ಹೇಳುತ್ತಾರೆ- ಯಾರಾದರೂ ತನ್ನ ಕರ್ಮಗಳು ತಕ್ಕಡಿಯಲ್ಲಿ ಸರಿಯಾಗಿ ತೂಗಬೇಕೆಂದು ಬಯಸುವುದಾದರೆ ಸಭೆಯ ಅಂತ್ಯದಲ್ಲಿ ಅವನು ಎದ್ದೇಳುವುದಕ್ಕಿಂತ ಮುಂಚೆ ಈ ದುಆ ಪಠಿಸಲಿ:

سُبْحَانَ رَبِّكَ رَبِّ الْعِزَّةِ عَمَّا يَصِفُوْنَ وَ سَلَامٌ عَلَى
الْمُرْسَلِيْنَ وَالْحَمْدُ لِلّٰهِ رَبِّ الْعَالَمِيْنَ۔

"ಸುಬ್ಹಾನ ರಬ್ಬಿಕ ರಬ್ಬಿಲ್ ಇಝ್ಝತಿ ಅಮ್ಮಾ ಯಸಿಫೂನ್ ವ ಸಲಾಮುನ್ ಅಲಲ್ ಮುರ್ಸಲೀನ್ ವಲ್ ಹಮ್ದುಲಿಲ್ಲಾಹಿ ರಬ್ಬಿಲ್ ಆಲಮೀನ್"

ಗೌರವಾನ್ವಿತನಾದ ನಿನ್ನ ಪ್ರಭು ಜನರಾಡುವ ಮಾತುಗಳಿಂದ ಪರಿಶುದ್ಧನಾಗಿರುವನು. ಸಂದೇಶವಾಹಕರೆಲ್ಲರ ಮೇಲೆ ದೇವನ ಶಾಂತಿ ಇರಲಿ. ಸರ್ವಸ್ತುತಿಸ್ತೋತ್ರಗಳು ಅಲ್ಲಾಹನಿಗಾಗಿವೆ. (ಅಬೂ ನಈಮ್)

١

# ವಿಭಿನ್ನ ಪ್ರಾರ್ಥನೆಗಳು

ಇಸ್ತಿಖಾರಃ

ಹ. ಜಾಬಿರ್‌ರಿಂದ(ರ) ವರದಿಯಾಗಿದೆ- ಪ್ರವಾದಿಯವರು(ಸ) ನಮಗೆ ಪ್ರತಿಯೊಂದು ವಿಷಯದಲ್ಲೂ ಇಸ್ತಿಖಾರಃ (ಒಂದು ಕಾರ್ಯ ಮಾಡುವುದೋ ಬಿಡುವುದೋ ಎಂಬ ಬಗ್ಗೆ ದೇವಪ್ರೇರಣೆಗಾಗಿ ಪ್ರಾರ್ಥನೆ) ಮಾಡಬೇಕೆಂದು ಆದೇಶಿಸುತ್ತಿದ್ದರು. ಪವಿತ್ರ ಕುರ್‌ಆನಿನ ಯಾವುದಾದರೊಂದು ಅಧ್ಯಾಯವನ್ನು ಕಲಿಸುವಂತೆ ಅದನ್ನು ಬೋಧಿಸುತ್ತಿದ್ದರು. 'ನಿಮ್ಮ ಪೈಕಿ ಯಾರಾದರೂ ಮಹತ್ವದ ವಿಷಯಗಳಿಗೆ ಸಂಬಂಧಿಸಿ 2 ರಕಅತ್ ನಫಿಲ್ ನಮಾಝ್ ಮಾಡಿ ಈ ದುಆ ಪಠಿಸಲಿ:

اَللّٰهُمَّ اِنِّىْ اَسْتَخِيْرُكَ بِعِلْمِكَ وَاَسْتَقْدِرُكَ بِقُدْرَتِكَ
وَ اَسْأَلُكَ مِنْ فَضْلِكَ الْعَظِيْمِ، فَاِنَّكَ تَقْدِرُ وَلاَ اَقْدِرُ وَ
تَعْلَمُ وَلاَ اَعْلَمُ وَ اَنْتَ عَلاَّمُ الْغُيُوْبِ - اَللّٰهُمَّ اِنْ كُنْتَ تَعْلَمُ
اَنَّ هٰذَا الْاَمْرَ خَيْرٌ لِّىْ فِىْ دِيْنِىْ وَ مَعَاشِىْ وَ عَاقِبَةِ اَمْرِىْ
(اَوْ قَالَ عَاجِلِ اَمْرِىْ وَآجِلِهٖ) فَاقْدُرْهُ لِىْ وَ يَسِّرْهُ لِىْ ثُمَّ
بَارِكْ لِىْ فِيْهِ - وَ اِنْ كُنْتَ تَعْلَمُ اَنَّ هٰذَا الْاَمْرَ شَرٌّ لِّىْ فِىْ
دِيْنِىْ وَ مَعَاشِىْ وَ عَاقِبَةِ اَمْرِىْ - (اَوْ قَالَ فِىْ عَاجِلِ اَمْرِىْ
وَآجِلِهٖ) فَاصْرِفْهُ عَنِّىْ وَاصْرِفْنِىْ عَنْهُ وَاقْدُرْ لِىَ الْخَيْرَ
حَيْثُ كَانَ ثُمَّ اَرْضِنِىْ بِهٖ۔

"ಅಲ್ಲಾಹುಮ್ಮ ಇನ್ನೀ ಅಸ್ತಖೀರುಕ ಬಿಇಲ್ಮಿಕ ವ ಅಸ್ತಕ್‌ದಿರುಕ ಬಿಕುದ್‌ರತಿಕ ವಅಸ್‌ಅಲುಕ ಮಿನ್ ಫದ್‌ಲಿಕಲ್ ಅಝೀಮ್. ಫ ಇನ್ನಕ ತಕ್‌ದಿರು ವಲಾ ಅಕ್‌ದಿರು

ವತಅ್‌ಲಮು ವಲಾ ಅಅ್‌ಲಮು, ವ ಅಂತ ಅಲ್ಲಾಮುಲ್ ಗುಯೂಬ್ ಅಲ್ಲಾಹುಮ್ಮ ಇನ್‌ಕುಂತ ತಅ್‌ಲಮು ಅನ್ನಹಾದಲ್ ಅಮ್ರ ಖೈರುಲ್ಲೀ ಫೀ ದೀನೀ ವಮಆಶೀ ವ ಆಕಿಬತಿ ಅಮ್ರೀ (ಅವ್ ಖಾಲ ಆಜಿಲಿ ಅಮ್ರೀ ವ ಆಜಿಲಿಹೀ) ಫಕ್‌ದುರುಹು ಲೀ ವಯಸ್ಸಿರ್‌ಹುಲೀ ಸುಮ್ಮ ಬಾರಿಕ್ ಲೀ ಫೀಹಿ- ವ ಇನ್ ಕುಂತ ತಅ್‌ಲಮು ಅನ್ನಹಾದಲ್ ಅಮ್ರ ಶರ್‍ರುಲ್ಲೀ ಫೀ ದೀನೀ ವಮಆಶೀ ವಆಕಿಬತಿ ಅಮ್ರೀ (ಅವ್ ಖಾಲಾ ಫೀ ಆಜಿಲಿ ಅಮ್ರೀ ವಆಜಿಲಿಹೀ) ಫಸ್‌ರಿಫ್‌ಹು ಅನ್ನೀ ವಸ್‌ರಿಫ್ನೀ ಅನ್‌ಹು ವಕ್‌ದುರ್ ಲಿಯಲ್ ಖೈರ ಹೈಸು ಕಾನ ಸುಮ್ಮರ್ದಿನೀ ಬಿಹಿ"

ಓ ಅಲ್ಲಾಹ್! ನಾನು ನಿನ್ನಿಂದ ನಿನ್ನ ಜ್ಞಾನದ ಆಧಾರದಲ್ಲಿ ಅತ್ಯುತ್ತಮವಾದ ಒಳಿತನ್ನು ಬಯಸುತ್ತೇನೆ. ನಿನ್ನ ಸಾಮರ್ಥ್ಯದ ಆಧಾರದಲ್ಲಿ ನಿನ್ನಿಂದ ಮಹಾ ಅನುಗ್ರಹವನ್ನು ಅರಸುತ್ತೇನೆ. ಏಕೆಂದರೆ ನೀನು ಸರ್ವ ಸಮರ್ಥನು. ನಾನು ಏನೇನೂ ಸಾಮರ್ಥ್ಯ ಹೊಂದಿಲ್ಲ. ನೀನು ಸರ್ವಜ್ಞನು. ನಾನು ಏನೇನೂ ಜ್ಞಾನ ಹೊಂದಿಲ್ಲ. ನೀನು ಪರೋಕ್ಷದ ಎಲ್ಲ ವಿಷಯಗಳನ್ನು ಬಲ್ಲವನಾಗಿರುವಿ.

ಓ ಅಲ್ಲಾಹ್! ನಿನ್ನ ಜ್ಞಾನದಂತೆ ನನ್ನ ಪಾಲಿಗೆ ಈ ಕೆಲಸವು ಉತ್ತಮವಾಗಿದ್ದರೆ ನನ್ನ ಇಹಪರಲೋಕಗಳ ಮಟ್ಟಿಗೆ ಹಾಗೂ ಅದರ ಪರಿಣಾಮದ ಮಟ್ಟಿಗೆ ನೀನು ಅದನ್ನು ನನಗೆ ವಿಧಿಸು. ಅದನ್ನು ನನಗೆ ಸುಗಮಗೊಳಿಸು ಮತ್ತು ನನಗೆ ಅದನ್ನು ಮಂಗಳಮಯ ಗೊಳಿಸು. ಒಂದು ವೇಳೆ ನಿನ್ನ ಜ್ಞಾನದಂತೆ ಈ ಕಾರ್ಯವು ನನ್ನ ಪಾಲಿಗೆ ಕೆಡುಕಾಗಿದ್ದರೆ ನನ್ನ ಇಹಪರ ಲೋಕಗಳ ಮಟ್ಟಿಗೆ ಹಾಗೂ ಅದರ ಪರಿಣಾಮದ ಮಟ್ಟಿಗೆ ಈ ಕಾರ್ಯ ವನ್ನು ನನ್ನಿಂದ ದೂರವಿರಿಸು. ನನ್ನನ್ನು ಅದರಿಂದ ಕಾಪಾಡು. ನನಗೆ ಒಳಿತು ಮತ್ತು ಪುಣ್ಯವನ್ನು ವಿಧಿಸು. ಎಲ್ಲಿದ್ದರೂ ಸರಿಯೆ ಮತ್ತು ಅದರ ಬಗ್ಗೆ ನನ್ನನ್ನು ಸಂತೃಪ್ತನಾಗಿ ಮಾಡು ಮತ್ತು ಏಕಾಗ್ರತೆ ನೀಡು. (ಬಳಿಕ ತನ್ನ ಅಪೇಕ್ಷೆಯನ್ನು ಸ್ಮರಿಸಲಿ.) (ಬುಖಾರಿ)

## ಅಪೇಕ್ಷೆಯ ನಮಾಝ್

ಹ. ಅಬ್ದುಲ್ಲಾ ಬಿನ್ ಅಬೀ ಔಫಾ(ರ) ಹೇಳುತ್ತಾರೆ. ಒಮ್ಮೆ ಪ್ರವಾದಿ(ಸ) ನಮ್ಮ ಬಳಿ ಬಂದು ಹೇಳಿದರು. 'ನಿಮ್ಮ ಪೈಕಿ ಯಾರಿಗಾದರೂ ಅಲ್ಲಾಹನಿಂದ ಯಾವುದಾದರೂ ಅಪೇಕ್ಷೆ ಅಥವಾ ಆದಮರ ಮಕ್ಕಳಲ್ಲಿ ಯಾರದಾದರೊಬ್ಬರ ಅಪೇಕ್ಷೆ ತಡೆದಿದ್ದರೆ (ಬಾಕಿಯಾಗಿದ್ದರೆ) ಆತ ಚೆನ್ನಾಗಿ ವುಝೂ ಮಾಡಲಿ, ಎರಡು ರಕಅತ್ ನಮಾಝ್ ನಿರ್ವಹಿಸಲಿ ಮತ್ತು ಅಲ್ಲಾಹನನ್ನು ಸ್ತುತಿಸಲಿ ಹಾಗೂ ಪ್ರವಾದಿಯವರ(ಸ) ಮೇಲೆ ಸಲಾತ್ ಹೇಳಲಿ. ಬಳಿಕ ಇಹ ಪರಲೋಕಕ್ಕೆ ಸಂಬಂಧಿಸಿದಂತಹ ಅವಶ್ಯಕತೆಗಳಲ್ಲಿ ಬೇಕಾದುದನ್ನು ಅಲ್ಲಾಹನಿಂದ ಬೇಡಲಿ. ಅದು ಆತನ ವಿಧಿಯಾಗುವುದು.

لَآ اِلٰـهَ اِلَّا اللّٰهُ الْحَلِيْمُ الْكَرِيْمُ، سُبْحَانَ اللّٰهِ رَبِّ الْعَرْشِ الْعَظِيْمِ، اَلْحَمْدُ لِلّٰهِ رَبِّ الْعٰلَمِيْنَ، اَسْأَلُکَ مُوْجِبَاتِ رَحْمَتِکَ وَ عَزَائِمَ مَغْفِرَتِکَ، وَالْعِصْمَةَ مِنْ كُلِّ ذَنْبٍ، وَالْغَنِيْمَةَ مِنْ كُلِّ بِرٍّ وَالسَّلَامَةَ مِنْ كُلِّ اِثْمٍ لَا تَدَعْ لِیْ ذَنْبًا اِلَّا غَفَرْتَهٗ وَلَا هَمًّا اِلَّا فَرَّجْتَهٗ وَلَا حَاجَةً هِیَ لَکَ رِضًا اِلَّا قَضَيْتَهَا يَا اَرْحَمَ الرَّاحِمِيْنَ۔

"ಲಾ ಇಲಾಹ ಇಲ್ಲಲ್ಲಾಹುಲ್ ಹಲೀಮುಲ್ ಕರೀಮ್, ಸುಬ್ಹಾನಲ್ಲಾಹಿ ರಬ್ಬಿಲ್ ಅರ್ಶಿಲ್ ಅಝೀಮ್, ಅಲ್ ಹಮ್ದುಲಿಲ್ಲಾಹಿ ರಬ್ಬಿಲ್ ಆಲಮೀನ್. ಅಸ್‌ಅಲುಕ ಮೂಜಿಬಾತಿ ರಹ್ಮತಿಕ ವ ಅಝಾಇಮ ಮಗ್‌ಫಿರತಿಕ, ವಲ್ ಇಸ್ಮತ ಮಿನ್ ಕುಲ್ಲಿ ದಂಬಿನ್, ವಲ್‌ಗನೀಮತ ಮಿನ್ ಕುಲ್ಲಿ ಬಿರ್ರಿನ್ ವಸ್ಸಲಾಮತ ಮಿನ್ ಕುಲ್ಲಿ ಇಸ್ಮಿನ್ ಲಾ ತದಅ್‌ಲೀ ದನ್ಬನ್ ಇಲ್ಲಾ ಗಫರ್‌ತಹೂ ವಲಾ ಹಮ್ಮನ್ ಇಲ್ಲಾ ಫರ್‍ರಜ್ತಹೂ ವಲಾ ಹಾಜತನ್ ಹಿಯಲಕ ರಿಲನ್ ಇಲ್ಲಾ ಕದೈತಹಾದ ಯಾ ಅರ್ಹಮರ್‍ರಾಹಿಮೀನ್"

'ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಆತನು ಅತ್ಯಂತ ಸಹನಶೀಲ ಮತ್ತು ಉದಾರಿ ಯಾಗಿರುವನು. ವಿಶ್ವ ಸಿಂಹಾಸನದ ಮಹೋನ್ನತನಾದ ಅಲ್ಲಾಹನು ಪರಮಪಾವನನು. ಸಕಲ ಸ್ತುತಿಸ್ತೋತ್ರಗಳು ಸರ್ವಲೋಕಗಳ ಪರಿಪಾಲಕನಾದ ಅಲ್ಲಾಹನಿಗಾಗಿವೆ. ಓ ಅಲ್ಲಾಹ್! ನಿನ್ನ ಕರುಣೆಯನ್ನು ನನ್ನ ಮೇಲೆ ಕಡ್ಡಾಯಗೊಳಿಸುವ ಮತ್ತು ನಿನ್ನ ಕ್ಷಮೆಯನ್ನು ಖಾತ್ರಿಗೊಳಿಸುವ ವಸ್ತುಗಳನ್ನು ಬೇಡುತ್ತೇನೆ. ಎಲ್ಲ ಒಳಿತುಗಳಲ್ಲಿ ಪಾಲು ಮತ್ತು ಎಲ್ಲ ಕೆಡುಕುಗಳಿಂದ ಸಂರಕ್ಷಣೆ ಯಾಚಿಸುತ್ತೇನೆ. ಓ ಅಲ್ಲಾಹ್! ನೀನು ನನ್ನ ಯಾವ ಪಾಪವನ್ನೂ ಕ್ಷಮಿಸದೆ ಇರಬೇಡ. ನನ್ನ ಯಾವ ದುಃಖ ದುಮ್ಮಾನವನ್ನೂ ನೀಗಿಸದಿರ ಬೇಡ. ನಿನಗೆ ಪ್ರಿಯವಾದ ನನ್ನ ಯಾವ ಬಯಕೆಯನ್ನೂ ಈಡೇರಿಸದೆ ಇರಬೇಡ. ಓ ಕರುಣಾಳುಗಳಲ್ಲಿ ಅತ್ಯಧಿಕ ಕರುಣಾಳುವೇ!

## ಪ್ರಯಾಣದ ದುಆಗಳು

ಪ್ರಯಾಣಕ್ಕೆ ಹೊರಟಾಗ ಈ ಪದಗಳನ್ನು ಪಠಿಸಿರಿ.

اَسْتَوْدِعُ اللّٰهَ دِيْنَکَ، وَاَمَانَتَکَ، وَخَوَاتِيْمَ عَمَلِکَ، وَاَقْرَأُ عَلَيْکَ السَّلَامَ۔

"ಅಸ್ತೌದಿಉಲ್ಲಾಹ ದೀನಕ ವ ಅಮಾನತಕ ವ ಖವಾತೀಮ ಅಮಲಿಕ ವ ಅಕ್‌ರಉ ಅಲೈಕಸ್ಸಲಾಮು."

ನಾನು ನನ್ನ ಧರ್ಮ, ಅಮಾನತ್(ಕುಟುಂಬ) ಮತ್ತು ಕರ್ಮ ಸಮಾಪ್ತಿಯನ್ನು ಅಲ್ಲಾಹನ ವಶಕ್ಕೆ ಒಪ್ಪಿಸುತ್ತೇನೆ ಹಾಗೂ ನಿನ್ನ ಸುರಕ್ಷೆಯ ಅಪೇಕ್ಷಕನಾಗಿರುವೆ.

(ಅಬ್ದುಲ್ಲಾ ಬಿನ್ ಉಮರ್- ತಿರ್ಮಿದಿ, ನಸಾಈ)

ಅಲ್ಲಾಹನನ್ನು ಭಯಪಡುತ್ತಲಿರುವಂತೆ ಹಾಗೂ ಎತ್ತರ ಪ್ರದೇಶಗಳಿಗೆ ತಲಪಿದಾಗ ಅಲ್ಲಾಹು ಅಕ್ಬರ್ ಹೇಳುವಂತೆ ಉಪದೇಶಿಸಿರಿ. ತರುವಾಯ ಈ ರೀತಿ ಪ್ರಾರ್ಥಿಸಿರಿ.

اَللّٰهُمَّ اَطْوِلَهُ الْبُعْدَ وَهَوِّنْ عَلَيْهِ السَّفَرَ۔

"ಅಲ್ಲಾಹುಮ್ಮ ಅತ್ವಿಲಹುಲ್ ಬುಅ್‌ದ ವ ಹವ್ವಿನ್ ಅಲೈಹಿಸ್ಸಫರ"

ಓ ಅಲ್ಲಾಹ್! ದೂರವನ್ನು ಈತನಿಗೆ ಕಿರಿದಾಗಿಸು, ಪ್ರಯಾಣವನ್ನು ಈತನಿಗೆ ಸುಲಭಗೊಳಿಸು. (ಅಬೂಹುರೈರಾ, ತಿರ್ಮಿದಿ, ನಸಾಈ)

ಆ ಬಳಿಕ ಈ ದುಆ ಪಠಿಸಿರಿ:

زَوَّدَكَ اللّٰهُ التَّقْوٰى، وَ غَفَرَ ذَنْبَكَ، وَ يَسَّرَ لَكَ الْخَيْرَ حَيْثُمَا كُنْتَ۔

"ಝುವ್ವದಕಲ್ಲಾಹುತ್ತಕ್ವಾ, ವಗಫರ ದಂಬಕ, ವಯಸ್ಸರ ಲಕಲ್ ಖೈರ ಹೈಸುಮಾ ಕುಂತ"

ನೀವು ಎಲ್ಲಿದ್ದರೂ ಅಲ್ಲಾಹನು ನಿಮಗೆ ದೇವಭಯದ ದಾರಿವೆಚ್ಚವನ್ನು ದಯಪಾಲಿಸಲಿ. ನಿಮ್ಮ ಪಾಪಗಳನ್ನು ಕ್ಷಮಿಸಲಿ ಮತ್ತು ಒಳಿತನ್ನು ನಿಮಗೆ ಸುಲಭಗೊಳಿಸಲಿ.

## ವಿದಾಯ ಕೋರುವವರಿಗಾಗಿ, ಯಾತ್ರಿಕನು ಪಠಿಸುವ ದುಆ

اَسْتَوْدِعُكَ اللّٰهَ الَّذِىْ لَا تَضِيْعُ وَدَائِعُهٗ۔

"ಅಸ್ತೌದಿಉಕಲ್ಲಾಹಲ್ಲದೀ ಲಾ ತದೀವು ವದಾಇಉಹು"

ನಾನು ನಿಮ್ಮನ್ನು ಅಲ್ಲಾಹನ ವಶಕ್ಕೆ ಒಪ್ಪಿಸುತ್ತೇನೆ. ಆತನಿಗೊಪ್ಪಿಸಿದ ಅಮಾನತು ಎಂದೂ ನಿಷ್ಫಲವಾಗದು. (ಅಬೂಹುರೈರಾ, ತಬ್ರಾನಿ)

ತರುವಾಯ ತನಗಾಗಿ ಅಲ್ಲಾಹನಲ್ಲಿ ಈ ರೀತಿ ಪ್ರಾರ್ಥಿಸಲಿ.

اَللّٰهُمَّ بِكَ اَصُوْلُ، وَبِكَ اَجُوْلُ، وَبِكَ اَسِيْرُ، اَللّٰهُمَّ اِنِّىْ اَسْئَلُكَ فِىْ سَفَرِىْ هٰذَا الْبِرَّ وَالتَّقْوٰى، وَمِنَ الْعَمَلِ مَا تَرْضٰى، اَللّٰهُمَّ هَوِّنْ عَلَيْنَا سَفَرَنَا هٰذَا وَاطْوِعَنَّا بُعْدَهٗ اَللّٰهُمَّ اَنْتَ الصَّاحِبُ فِى السَّفَرِ وَالْخَلِيْفَةُ فِى الْاَهْلِ– اَللّٰهُمَّ اِنِّىْ

اَعُوْذُبِکَ مِنْ وَعْثَاءِ السَّفَرِ وَكَآبَةِ الْمَنظَرِ، وَسُوْءِ الْمُنْقَلَبِ فِى الْمَالِ وَالْاَهْلِ وَالْوَلَدِ۔

"ಅಲ್ಲಾಹುಮ್ಮ ಬಿಕ ಅಸೂಲು, ವಬಿಕ ಅಜೂಲು, ವಬಿಕ ಅಸೀರು, ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಫೀ ಸಫರಿ ಹಾದಲ್ ಬಿರ್‍ರ ವತ್ತಕ್‌ವಾ ವಮಿನಲ್ ಅಮಲಿ ಮಾತರ್ದಾ, ಅಲ್ಲಾಹುಮ್ಮ ಹವ್ವಿನ್ ಅಲೈನಾ ಸಫರನಾ ಹಾದಾ ವತ್‌ವಿಅನ್ನಾ ಬುಅ್‌ದಹೂ ಅಲ್ಲಾಹುಮ್ಮ ಅಂತಸ್ಸಾಹಿಬು ಫಿಸ್ಸಫರಿ ವಲ್ ಖಲೀಫತು ಫಿಲ್ ಅಹ್ಲಿ ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನ್ ವಅ್‌ಸಾ ಇಸ್ಸಫರಿ ವಕಆಬತಿಲ್ ಮನ್‌ಝರಿ ವಸೌಇಲ್ ಮುಂಕಲಬಿ ಫಿಲ್ ಮಾಲಿ ವಲ್ ಅಹ್ಲಿ ವಲ್ ವಲದಿ"

ಓ ಅಲ್ಲಾಹ್! ನಾನು ನಿನ್ನ ನಾಮದಿಂದ ಈ ಪ್ರಯಾಣವನ್ನು ಆರಂಭಿಸುತ್ತೇನೆ. ನಿನ್ನ ನಾಮದಿಂದಲೇ ತಿರುಗುತ್ತೇನೆ ಮತ್ತು ಚಲಿಸುತ್ತೇನೆ. ಓ ಅಲ್ಲಾಹ್! ನಾನು ನಿನ್ನಿಂದ ಈ ಪ್ರಯಾಣದಲ್ಲಿ ಒಳಿತು, ದೇವಭಯ ಮತ್ತು ನಿನಗೆ ಪ್ರಿಯವಾದ ಕರ್ಮಗಳ ಅಪೇಕ್ಷಕನಾಗಿರುವೆ. ಓ ಅಲ್ಲಾಹ್! ನೀನು ಈ ಪ್ರಯಾಣವನ್ನು ಸುಲಭಗೊಳಿಸು. ಅದರ ದೂರವನ್ನು ಸಂಕ್ಷಿಪ್ತಗೊಳಿಸು. ಓ ಅಲ್ಲಾಹ್! ನೀನೇ ನಮ್ಮ ಪ್ರಯಾಣದಲ್ಲಿ ಸಂಗಾತಿ ಯಾಗಿರುವೆ ಮತ್ತು ಮನೆ ಮಂದಿಯ ಸಂರಕ್ಷಕನಾಗಿರುವೆ. ಓ ಅಲ್ಲಾಹ್! ಪ್ರಯಾಣದ ಸಂಕಷ್ಟಗಳಿಂದ ನಿನ್ನ ಅಭಯ ಯಾಚಿಸುತ್ತೇನೆ. ಪ್ರಯಾಣದಿಂದ ಮರಳುವಾಗ ಕುಟುಂಬ ದಲ್ಲುಂಟಾಗಬಹುದಾದ ದುರವಸ್ಥೆಯಿಂದ ಹಾಗೂ ಅಪ್ರಿಯವಾದ ವಾರ್ತೆ ಮತ್ತು ನೋಟಗಳಿಂದ ನಿನ್ನ ಅಭಯ ಯಾಚಿಸುತ್ತೇನೆ.

ಪ್ರಯಾಣದಿಂದ ಮರಳುವಾಗ ಈ ಪದಗಳನ್ನು ಸೇರಿಸಿ ಪ್ರಾರ್ಥಿಸಿರಿ

آيِبُوْنَ تَائِبُوْنَ عَابِدُوْنَ لِرَبِّنَا حَامِدُوْنَ۔

"ಆಇಬೂನ, ತಾಇಬೂನ, ಆಬಿದೂನ ಲಿರಬ್ಬಿನಾ ಹಾಮಿದೂನ"

ನಾವು ಮರಳುವವರು, ಪಶ್ಚಾತ್ತಾಪಪಟ್ಟು ಮರಳುವವರು. ವಿಧೇಯರು ಮತ್ತು ನಮ್ಮ ಪ್ರಭುವನ್ನು ಸ್ತುತಿಸುವವರೂ ಆಗಿದ್ದೇವೆ.

(ಅಲೀ, ಇಬ್ನು ಉಮರ್(ರ)- ಅಹ್ಮದ್, ಮುಸ್ಲಿಮ್)

ಸವಾರಿಯಲ್ಲಿ ಕುಳಿತುಕೊಳ್ಳುವಾಗ 'ಬಿಸ್ಮಿಲ್ಲಾಹ್' ಹೇಳಿ ಈ ಪದಗಳನ್ನು ಪಠಿಸಲಿ:

اَلْحَمْدُ لِلّٰهِ الَّذِىْ سَخَّرَ لَنَا هٰذَا وَمَا كُنَّا لَهٗ مُقْرِنِيْنَ، وَ اِنَّا اِلٰى رَبِّنَا لَمُنْقَلِبُوْنَ۔

"ಅಲ್‌ಹಮ್ದುಲಿಲ್ಲಾಹಿಲ್ಲದೀ ಸಖ್ಖರ ಲನಾ ಹಾದಾ ವಮಾ ಕುನ್ನಾ ಲಹು ಮುಕ್ರಿನೀನ್, ವ ಇನ್ನಾ ಇಲಾ ರಬ್ಬಿನಾ ಲಮುಂಕಲಿಬೂನ್"

ಸರ್ವಸ್ತುತಿಗಳು ಅಲ್ಲಾಹನಿಗೆ ಮೀಸಲು. ಇದನ್ನು ನಮಗಾಗಿ ನಿಯಂತ್ರಿಸಿಕೊಟ್ಟವನು ಪರಮಪಾವನನು. ಅನ್ಯಥಾ ನಾವು ಇದನ್ನು ಹತೋಟಿಯಲ್ಲಿರಿಸಲು ಶಕ್ತರಾಗಿರಲಿಲ್ಲ ಮತ್ತು ನಮಗೊಂದು ದಿನ ನಮ್ಮ ಪ್ರಭುವಿನ ಕಡೆಗೆ ಮರಳಲಿಕ್ಕಿದೆ.

(ಹ. ಅಲೀ(ರ)- ಅಬೂದಾವೂದ್, ತಿರ್ಮಿದಿ)

## ಅದ್ಭುತ ದೃಶ್ಯ ಕಂಡಾಗ ಪಠಿಸುವ ದುಆ

اَللّٰهُمَّ صَيِّبًا نَافِعًا۔

"ಅಲ್ಲಾಹುಮ್ಮ ಸ್ವಯ್ಯಿಬನ್ ನಾಫಿಅನ್"

1. ಓ ಅಲ್ಲಾಹ್! ಸುಸ್ಥಿತಿ ಮತ್ತು ಪ್ರಯೋಜನಕಾರಿಯಾದ ಮಳೆ ಸುರಿಸು.

(ಹ. ಆಯಿಶಾ(ರ)- ಇಬ್ನು ಅಬೀ ಶೈಬ)

2. ವಿಪರೀತ ಮಳೆಯಾಗಿ ನಷ್ಟವಾಗುವ ಭೀತಿ ಇದ್ದರೆ ಬೇಡುವ ದುಆ:-

اَللّٰهُمَّ حَوَالَيْنَا وَلاَ عَلَيْنَا، اَللّٰهُمَّ عَلَى الآكَامِ وَالآجَامِ
وَالظِّرَابِ وَالاَوْدِيَةِ، وَ مَنَابِتِ الشَّجَرِ۔

"ಅಲ್ಲಾಹುಮ್ಮ ಹವಾಲೈನಾ ವಲಾ ಅಲೈನಾ, ಅಲ್ಲಾಹುಮ್ಮ ಅಲಲ್ ಆಕಾಮಿ ವಲ್ ಆಜಾಮಿ ವಝ್ಝಿರಾಬಿ ವಲ್ ಅದಿಯತಿ, ವಮನಾಬಿತಿಶ್ಶಜರಿ"

ಓ ಅಲ್ಲಾಹ್! ನಮ್ಮ ಮೇಲೆ ಮಳೆಗರೆಯಬೇಡ. ನಮ್ಮ ಸುತ್ತಮುತ್ತಲ ಪ್ರದೇಶದಲ್ಲಿ ಮಳೆಗರೆ. ಓ ಅಲ್ಲಾಹ್ ಗುಡ್ಡಬೆಟ್ಟ, ಕಣಿವೆಗಳಲ್ಲಿ, ಮರಗಳಿರುವ ಸ್ಥಳಗಳಲ್ಲಿ, ಪರ್ವತಗಳಲ್ಲಿ ಮತ್ತು ಅರಣ್ಯಗಳಲ್ಲಿ ಮಳೆಸುರಿಸು.

(ಹ. ಅನಸ್(ರ)- ಬುಖಾರಿ)

3. ಗುಡುಗು ಮಿಂಚಿನ ಘರ್ಜನೆ ವೇಳೆ ಪಠಿಸುವ ದುಆ:-

اَللّٰهُمَّ لاَ تَقْتُلْنَا بِغَضَبِكَ وَلاَ تُهْلِكْنَا بِعَذَابِكَ وَ عَافِنَا قَبْلَ
ذٰلِكَ۔

"ಅಲ್ಲಾಹುಮ್ಮ ಲಾ ತಕ್ತುಲ್ನಾ ಬಿಗದಬಿಕ ವಲಾತುಹ್‌ಲಿಕ್‌ನಾ ಬಿಅದಾಬಿಕ ವ ಆಫಿನಾ ಕಬ್ಲ ದಾಲಿಕ"

ಓ ಅಲ್ಲಾಹ್! ನಮ್ಮನ್ನು ನಿನ್ನ ಕ್ರೋಧದಿಂದ ಕೊಲ್ಲಬೇಡ. ನಿನ್ನ ಕ್ರೋಧದಿಂದ ನಾಶಗೊಳಿಸಬೇಡ. ಅದಕ್ಕಿಂತ ಮುಂಚೆಯೇ ನಮ್ಮನ್ನು ನಿನ್ನ ಕೃಪಾಶ್ರಯದಲ್ಲಿರಿಸು.

(ಅಬ್ದುಲ್ಲಾ ಬಿನ್ ಉಮರ್(ರ) ತಿರ್ಮಿದಿ)

4. ನವಮಾಸದ ಮೊದಲ ರಾತ್ರಿಯ ಚಂದ್ರದರ್ಶನವಾದಾಗ

اَللّٰهُ اَكْبَرُ، اَللّٰهُمَّ اَهِلَّهُ عَلَيْنَا بِالْيُمْنِ وَالْاِيْمَانِ، وَالسَّلَامَةِ وَالْاِسْلَامِ، وَالتَّوْفِيْقِ لِمَا تُحِبُّ وَ تَرْضٰى، رَبِّىْ وَ رَبُّكَ اللّٰهَ- هِلَالَ خَيْرٍ وَ رُشْدٍ۔

"ಅಲ್ಲಾಹು ಅಕ್ಬರ್, ಅಲ್ಲಾಹುಮ್ಮ ಅಹಿಲ್ಲಹೂ ಅಲೈನಾ ಬಿಲ್ ಯುಮ್ನಿ ವಲ್ ಈಮಾನಿ, ವಸ್ಸಲಾಮತಿ ವಲ್ ಇಸ್ಲಾಮಿ, ವತ್ತೌಫೀಕಿ ಲಿಮಾ ತುಹಿಬ್ಬು ವತರ್‌ದಾ, ರಬ್ಬೀ ವರಬ್ಬುಕಲ್ಲಾಹ್- ಹಿಲಾಲ ಖೈರಿನ್ ವ ರುಶ್ದಿನ್"

ಅಲ್ಲಾಹನು ಅತ್ಯಂತ ಮಹಾನನು. ಓ ಅಲ್ಲಾಹ್! ಈ ಚಂದ್ರನನ್ನು ನಮ್ಮ ಪಾಲಿಗೆ ಅನುಗ್ರಹ, ವಿಶ್ವಾಸ, ಸಂರಕ್ಷಣೆ ಮತ್ತು ಇಸ್ಲಾಮ್ ಹಾಗೂ ನಿನಗೆ ಪ್ರಿಯಕರವಾದ ಕಾರ್ಯಗಳನ್ನು ಮಾಡುವ ಸೌಭಾಗ್ಯ ದಯಪಾಲಿಸುವ ಚಂದ್ರನನ್ನಾಗಿ ಉದಯಿಸು. (ತರುವಾಯ ಬಾಲ ಚಂದಿರನತ್ತ ನೋಡಿ ಈ ರೀತಿ ಹೇಳಿರಿ:)

ಓ ಚಂದ್ರಾ, ನನ್ನ ಮತ್ತು ನಿನ್ನ ಪ್ರಭು ಅಲ್ಲಾಹನೇ ಆಗಿರುವನು. ಅಲ್ಲಾಹನೇ! ಈ ಚಂದ್ರನನ್ನು ನಮ್ಮ ಪಾಲಿಗೆ ಒಳಿತು ಮತ್ತು ಸನ್ಮಾರ್ಗದ ಚಂದ್ರನನ್ನಾಗಿ ಮಾಡು.

ಬಳಿಕ ಮೂರು ಸಲ ಈ ರೀತಿ ಹೇಳಿರಿ:-

اَللّٰهُمَّ اِنِّىْ اَسْأَلُكَ مِنْ خَيْرِ هٰذَا الشَّهْرِ وَ خَيْرِ الْقَدَرِ، وَ اَعُوْذُبِكَ مِنْ شَرِّهٖ۔

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಮಿನ್ ಖೈರಿ ಹಾದಶ್ಶಹ್‌ರಿ ವ ಖೈರಿಲ್ ಕದರಿ, ವ ಅಊದುಬಿಕ ಮಿನ್ ಶರ್‍ರಿಹೀ"

ಓ ಅಲ್ಲಾಹ್! ನಾನು ನಿನ್ನಿಂದ ಈ ತಿಂಗಳ ಸಮೃದ್ಧಿ, ವಿಧಿಯ ಒಳಿತಿನ ಅಪೇಕ್ಷಕನಾಗಿರುವೆ ಮತ್ತು ಅದರ ಕೇಡಿನಿಂದ ನಿನ್ನ ಅಭಯ ಯಾಚಿಸುತ್ತೇನೆ.

(ಹ. ಅಬ್ದುಲ್ಲಾ ಬಿನ್ ಉಮರ್(ರ)- ದಾರಿಮಿ, ತಿರ್ಮಿದಿ, ತಬ್ರಾನಿ)

## ಸಾಮಾಜಿಕ ಪ್ರಾರ್ಥನೆಗಳು

1. ವಿವಾಹ ಸಮಾರಂಭದಲ್ಲಿ ಭಾಗಿಯಾದಾಗ ಈ ಪದಗಳಿಂದ ವಧೂ ವರರಿಗಾಗಿ ಪ್ರಾರ್ಥಿಸಿರಿ.

بَارَكَ اللّٰهُ لَكَ، وَ بَارَكَ عَلَيْكَ، وَ جَمَعَ بَيْنَكُمَا فِىْ خَيْرٍ۔

"ಬಾರಕಲ್ಲಾಹುಲಕ, ವಬಾರಕ ಅಲೈಕ, ವಜಮಅ ಬೈನಕುಮಾ ಫೀ ಖೈರ್"

ಅಲ್ಲಾಹನು ನಿನ್ನನ್ನು ಉತ್ತಮವಾಗಿರಿಸಲಿ, ನಿನ್ನ ಮೇಲೆ ಸಮೃದ್ಧಿಯನ್ನು ವರ್ಷಿಸಲಿ, ನಿಮ್ಮಿರ್ವರೊಳಗೆ ಅತ್ಯುತ್ತಮ ಸಂಬಂಧವನ್ನೇರ್ಪಡಿಸಲಿ.

(ಹ. ಅಬೂಹುರೈರಾ(ರ)- ಬುಖಾರಿ, ಮುಸ್ಲಿಮ್)

2. ನವಜಾತ ಶಿಶುವನ್ನು ನಿಮ್ಮ ಬಳಿ ತಂದರೆ ಅದರ ಕಿವಿಯಲ್ಲಿ ಅದಾನ್ ಹೇಳಿರಿ. (ಅಬೂದಾವೂದ್, ನಸಾಈ)

3. ಮಗು ಮಾತನಾಡಲು ಪ್ರಾರಂಭಿಸಿದರೆ ಮೊತ್ತ ಮೊದಲು ಕಲಿಮ (ಪವಿತ್ರ ವಚನ) ಕಲಿಸಿರಿ - ಲಾ ಇಲಾಹ ಇಲ್ಲಲ್ಲಾಹ್ ಮತ್ತು ಅದರ ಹಾಲು ಹಲ್ಲು ಉದುರಿದಾಗ ನಮಾಝ್ ಮಾಡಿಸಿರಿ.

## ಕೆಟ್ಟದೃಷ್ಟಿಯ ಮಂತ್ರ

أُعِيْذُكَ بِكَلِمَاتِ اللّٰهِ التَّآمَّةِ، مِنْ كُلِّ شَيْطَانٍ وَّهَامَّةٍ وَ مِنْ كُلِّ عَيْنٍ لاَمَّةٍ۔

"ಉಈದುಕ ಬಿಕಲಿಮಾತಿಲ್ಲಾಹಿತ್ತಾಮ್ಮಾತಿ, ಮಿನ್ ಕುಲ್ಲಿ ಶೈತಾನಿನ್ ವಹಾಮ್ಮತಿ ವಮಿನ್ ಕುಲ್ಲಿ ಐನಿನ್ ಲಾಮ್ಮತಿನ್"

"ಎಲ್ಲ ಶೈತಾನರಿಂದ ಎಲ್ಲ ಉಪದ್ರವಕಾರಿ ವಸ್ತುಗಳಿಂದ ಮತ್ತು ಎಲ್ಲ ರೀತಿಯ ಕೆಟ್ಟ ದೃಷ್ಟಿಯಿಂದ ನಾನು ಅಲ್ಲಾಹನ ಸಮಗ್ರ ವಚನಗಳ ಮೂಲಕ ಅಭಯ ಯಾಚಿಸುತ್ತೇನೆ." (ಇಬ್ನು ಅಬ್ಬಾಸ್-ಬುಖಾರಿ)

## ವಿವಿಧ ಸನ್ನಿವೇಶಗಳ ಪ್ರಾರ್ಥನೆಗಳು

1. ಇಷ್ಟವಾದ ಏನಾದರೂ ಕಂಡಾಗ ಈ ಪದಗಳನ್ನು ಹೇಳಿರಿ

اَلْحَمْدُ لِلّٰهِ الَّذِىْ بِنِعْمَتِهٖ تَتِمُّ الصَّالِحَاتُ۔

"ಅಲ್ ಹಮ್ದುಲಿಲ್ಲಾಹಿಲ್ಲದೀ ಬಿನಿಅ್‌ಮತಿಹೀ ತತಿಮ್ಮುಸ್ಸಾಲಿಹಾತು"

ಸರ್ವಸ್ತುತಿ ಸ್ತೋತ್ರಗಳು ಅಲ್ಲಾಹನಿಗಾಗಿವೆ. ಆತನ ಕರುಣೆಯಿಂದಲೇ ಒಳಿತುಗಳು ಪೂರ್ಣಗೊಳ್ಳುತ್ತದೆ.

2. ಅಪ್ರಿಯವಾದುದನ್ನು ಕಂಡಾಗ ಈ ರೀತಿ ಹೇಳಿರಿ

اَلْحَمْدُ لِلّٰهِ عَلٰى كُلِّ حَالٍ۔

"ಅಲ್ ಹಮ್ದುಲಿಲ್ಲಾಹಿ ಅಲಾ ಕುಲ್ಲಿ ಹಾಲ್"

ಎಲ್ಲ ಸ್ಥಿತಿಯಲ್ಲೂ ಸಕಲ ಪ್ರಶಂಸೆಗಳು ಅಲ್ಲಾಹನಿಗಾಗಿವೆ.

(ಹ.ಆಯಿಶಾ(ರ)- ಹಾಕಿಮ್, ಇಬ್ನುಮಾಜಃ)

3. ಕನ್ನಡಿ ನೋಡುವಾಗ ಈ ರೀತಿ ಪ್ರಾರ್ಥಿಸಿ.

اَللّٰهُمَّ اَنْتَ حَسَّنْتَ خَلْقِیْ فَحَسِّنْ خُلُقِیْ وَ حَرِّمْ وَجْهِیْ عَلَی النَّارِ– اَلْحَمْدُ لِلّٰهِ الَّذِیْ سَوّٰی خَلْقِیْ فَعَدَلَهٗ، وَكَرَّمَ صُوْرَةَ وَجْهِیْ فَاَحْسَنَهَا وَ جَعَلَنِیْ مِنَ الْمُسْلِمِیْنَ۔

"ಅಲ್ಲಾಹುಮ್ಮ ಅಂತ ಹಸ್ಸನ್ತ ಖಲ್ಕೀ ಫಹಸ್ಸಿನ್ ಖುಲುಕೀ ವಹರ್ರಿಮ್ ವಜ್‌ಹೀ ಅಲನ್ನಾರಿ- ಅಲ್ ಹಮ್ದುಲಿಲ್ಲಾಹಿಲ್ಲದೀ ಸವ್ವ ಖಲ್ಕೀ ಫಅದಲಹೂ, ವಕರ್ರಮ ಸೂರತ ವಜ್‌ಹೀ ಫಅ್‌ಸನಹಾ ವಜಅಲನೀ ಮಿನಲ್ ಮುಸ್ಲಿಮೀನ್"

ಓ ಅಲ್ಲಾಹ್! ನೀನು ನನಗೆ ಸೊಗಸಾದ ಮುಖ ದಯಪಾಲಿಸಿದಂತೆ ಒಳ್ಳೆಯ ಚಾರಿತ್ರ್ಯದ ಸೌಭಾಗ್ಯ ನೀಡು. ನನ್ನ ಮುಖವನ್ನು ಬೆಂಕಿಗೆ ನಿಷಿದ್ಧಗೊಳಿಸು. ನನ್ನ ಶರೀರ ವನ್ನುಂಟು ಮಾಡಿ ಸಮತೋಲನದಲ್ಲಿರಿಸಿದ, ನನ್ನ ಮುಖವನ್ನು ಗೌರವಾನ್ವಿತಗೊಳಿಸಿದ, ನನ್ನನ್ನು ಸುಂದರನನ್ನಾಗಿಸಿದ ಮತ್ತು ಮುಸ್ಲಿಮರಲ್ಲಿ ಸೇರಿಸಿದ ಅಲ್ಲಾಹನಿಗೆ ಸರ್ವಸ್ತುತಿಸ್ತೋತ್ರಗಳು.

(ಅಬ್ದುಲ್ಲಾ ಬಿನ್ ಮಸ್‌ಊದ್, ಆಯಿಶಾ, ಅನಸ್(ರ), ಇಬ್ನು ಹಿಬ್ಬಾನ್, ತಬ್ರಾನಿ)

4. ಹೊಸ ಫಲಗಳನ್ನು ಕಂಡರೆ ಪಠಿಸುವ ದುಆ

اَللّٰهُمَّ بَارِكْ لَنَا فِیْ ثَمَرِنَا، وَ بَارِكْ لَنَا فِیْ مَدِيْنَتِنَا، وَ بَارِكْ لَنَا فِیْ صَاعِنَا، وَ بَارِكْ لَنَا فِیْ مُدِّنَا، اَللّٰهُمَّ اَرِيْتَنَا اَوَّلَهٗ فَارِنَا آخِرَهٗ۔

"ಅಲ್ಲಾಹುಮ್ಮ ಬಾರಿಕ್ ಲನಾ ಫೀ ಸಮರಿನಾ, ವಬಾರಿಕ್ ಲನಾ ಫೀ ಮದೀನತಿನಾ, ವ ಬಾರಿಕ್ ಲನಾ ಫೀ ಸಾಇನಾ ವಬಾರಿಕ್ ಲನಾ ಫೀ ಮುದ್ದಿನಾ, ಅಲ್ಲಾಹುಮ್ಮ ಅರಯ್‌ತನಾ ಅವ್ವಲಹೂ ಫಾ ರಿನಾ ಆಖಿರೂ"

ಓ ಅಲ್ಲಾಹ್! ನಮ್ಮ ಫಲಗಳಲ್ಲಿ ಸಮೃದ್ಧಿಯನ್ನುಂಟು ಮಾಡು, ನಮ್ಮ ನಗರದಲ್ಲಿ ಅನುಗ್ರಹ ವರ್ಷಿಸು. ತೂಕ ಮತ್ತು ಸಂಖ್ಯೆಯಲ್ಲಿ ಸಮೃದ್ಧಿಯನ್ನುಂಟು ಮಾಡು. ಓ ಅಲ್ಲಾಹ್! ನೀನು ಫಲಗಳ ಆರಂಭವನ್ನು ತೋರಿಸಿದಂತೆ ಅದರ ಕೊನೆಯನ್ನೂ ತೋರಿಸು. (ಅಬೂಹುರೈರಾ(ರ)- ಮುಸ್ಲಿಮ್, ತಿರ್ಮಿದಿ)

ಬಳಿಕ ಅದನ್ನು ಅಲ್ಲಿರುವ ಅತೀ ಚಿಕ್ಕ ಮಗುವಿಗೆ ಕೊಡಬೇಕು.

5. ಮುಸ್ಲಿಮ್ ಸಹೋದರ ನಗುವುದನ್ನು ಕಂಡರೆ ಈ ರೀತಿ ಹೇಳಿರಿ

اَضْحَكَ اللّٰهُ سِنَّكَ۔

"ಅದ್‌ಹಕಲ್ಲಾಹು ಸಿನ್ನಕ"

ಅಲ್ಲಾಹನು ನಿನ್ನನ್ನು ಸದಾ ಸಂತೋಷದಿಂದಿರಿಸಲಿ.

(ಸಅದ್ ಬಿನ್ ಅಬೀ ವಕ್ಕಾಸ್- ಬುಖಾರಿ, ಮುಸ್ಲಿಮ್)

6. ಸಲಾಮ್ ಹೇಳಿ ಕಳುಹಿಸಿದಾಗ ಸಲಾಮ್ ತಲುಪಿಸಿದವರಿಗೂ ಹೇಳಿದವರಿಗೂ 'ಅಲೈಹಿಮ್ ವ ಅಲೈಕುಮ್ ಸಲಾಮ್' ಹೇಳಿರಿ. (ಅನಸ್ ಬಿನ್ ಮಾಲಿಕ್(ರ)-ನಸಾಈ)

7. ಒಲವು ಪ್ರೀತಿ ಪ್ರಕಟಿಸಿದಾಗ ಹೇಳುವ ಪದ

اَحَبَّكَ الَّذِىْ اَحْبَبْتَنِىْ لَهٗ۔

"ಅಹಬ್ಬಕಲ್ಲದೀ ಅಹ್‌ಬಬ್‌ತನೀ ಲಹೂ"

ದೇವಸಂಪ್ರೀತಿಯ ಬಯಕೆಯಿಂದ ನೀನು ನನ್ನನ್ನು ಪ್ರೀತಿಸಿದಂತೆ ದೇವನೂ ಪ್ರೀತಿಸುವಂತಾಗಲಿ. (ಹ. ಅನಸ್(ರ)- ಅಬೂದಾವೂದ್, ನಸಾಈ, ಇಬ್ನು ಹಿಬ್ಬಾನ್)

8. ಸ್ಥಿತಿಗತಿ ವಿಚಾರಿಸಿದಾತನಿಗಾಗಿ ಪ್ರತ್ಯುತ್ತರ

اَحْمَدُ اللهَ اِلَيْكَ۔

"ಅಹ್‌ಮದುಲ್ಲಾಹ ಇಲೈಕ"

ನಿಮ್ಮೊಂದಿಗೆ ಅಲ್ಲಾಹನಿಗೆ ಸರ್ವಸ್ತುತಿಸ್ತೋತ್ರಗಳು (ಅರ್ಥಾತ್ ಕೃತಜ್ಞತೆಗಳು) ಅಥವಾ ಈ ರೀತಿ ಹೇಳಿರಿ:-

بِخَيْرٍ اَحْمَدُ اللهَ۔

"ಬಿಖೈರಿನ್ ಅಹ್‌ಮದುಲ್ಲಾಹ"

ಅಲ್ಲಾಹನಿಗೆ ಕೃತಜ್ಞತೆಗಳು, ಕ್ಷೇಮವಾಗಿರು.

(ಹ. ಅಬ್ದುಲ್ಲಾ ಬಿನ್ ಉಮರ್, ಅನಸ್(ರ)- ಅಹ್ಮದ್, ತಬ್ರಾನಿ)

9. ಒಳಿತು ಮಾಡಿದಾಗ ಈ ರೀತಿ ಕೃತಜ್ಞತೆ ಸಲ್ಲಿಸಿ

جَزَاكَ اللهُ خَيْرًا۔

"ಜಝಾಕಲ್ಲಾಹು ಖೈರನ್"

ಅಲ್ಲಾಹನು ನಿಮಗೆ ಉತ್ತಮ ಪ್ರತಿಫಲ ನೀಡಲಿ. (ತಿರ್ಮಿದಿ)

10. ದುಃಖ ದುಮ್ಮಾನ, ಸಂಕಷ್ಟ ಸಮಸ್ಯೆಗಳಲ್ಲಿ ಸಿಲುಕಿದಾಗ ಈ ರೀತಿ ಪ್ರಾರ್ಥಿಸಿರಿ.

لَآ اِلٰهَ اِلَّا اللهُ الْكَرِيْمُ الْعَظِيْمُ سُبْحَانَهٗ تَبَارَكَ اللهُ رَبُّ
الْعَرْشِ الْعَظِيْمِ، اَلْحَمْدُ لِلّٰهِ رَبِّ الْعٰلَمِيْنَ، تَوَكَّلْتُ عَلٰى

الْحَيِّ الَّذِىْ لاَ يَمُوْتُ، اَلْحَمْدُ لِلّٰهِ الَّذِىْ يَتَّخِذْ وَلَدًا، وَّلَمْ
يَكُنْ لَّهٗ شَرِيْكٌ فِى الْمُلْكِ، وَلَمْ يَكُنْ لَّهٗ وَلِيٌّ مِنَ الذُّلِّ
وَكَبِّرْهُ تَكْبِيْرًا – اَللّٰهُمَّ رَحْمَتَكَ اَرْجُوْ فَلاَ تَكِلْنِىْ اِلٰى
نَفْسِىْ طَرْفَةَ عَيْنٍ، وَاَصْلِحْ لِىْ شَانِىْ كُلَّهٗ، لَآ اِلٰـهَ اِلَّآ اَنْتَ۔
يَا حَيُّ يَا قَيُّوْمُ بِرَحْمَتِكَ اَسْتَغِيْثُ۔ لَآ اِلٰهَ اِلَّآ اَنْتَ سُبْحَانَكَ
اِنِّىْ كُنْتُ مِنَ الظّٰلِمِيْنَ– اَللّٰهُمَّ اِنِّىْ عَبْدُكَ وَابْنُ عَبْدِكَ
وَابْنُ اَمَتِكَ، نَاصِيَتِىْ بِيَدِكَ، مَاضٍ فِىَّ حُكْمُكَ، عَدْلٌ
فِىَّ قَضَاؤُكَ، اَسْاَلُكَ بِكُلِّ اِسْمٍ هُوَ لَكَ سَمَّيْتَ بِهٖ
نَفْسَكَ، اَوْ اَنْزَلْتَهٗ فِىْ كِتَابِكَ اَوْ عَلَّمْتَهٗ اَحَدًا مِنْ
خَلْقِكَ، اَوْ اِسْتَأْثَرْتَ بِهٖ فِىْ عِلْمِ الْغَيْبِ عِنْدَكَ اَنْ
تَجْعَلَ الْقُرْآنَ رَبِيْعَ قَلْبِىْ وَ نُوْرَ بَصَرِىْ وَجَلاَءَ حُزْنِىْ،
وَذَهَابَ هَمِّىْ، لاَ حَوْلَ وَلاَ قُوَّةَ اِلَّا بِاللّٰهِ–

"ಲಾ ಇಲಾಹ ಇಲ್ಲಲ್ಲಾಹುಲ್ ಕರೀಮುಲ್ ಅಝೀಮ್. ಸುಬ್ಹಾನಹು ತಬಾರಕಲ್ಲಾಹು ರಬ್ಬುಲ್ ಅರ್ಶಿಲ್ ಅಝೀಮ್. ಅಲ್ ಹಮ್ದುಲಿಲ್ಲಾಹಿ ರಬ್ಬಿಲ್ ಆಲಮೀನ, ತವಕ್ಕಲ್ತು ಅಲಲ್ ಹಯ್ಯಿಲ್ಲದೀ ಲಾಯಮೂತು ಅಲ್ ಹಮ್ದುಲಿಲ್ಲಾಹಿಲ್ಲದೀ ಯತ್ತಖಿದು ವಲದಂ, ವಲಮ್ ಯಕುನ್‌ಲ್ಲಹೂ ಶರೀಕುನ್ ಫಿಲ್ ಮುಲ್ಕಿ, ವಲಮ್ ಯಕುಲ್ಲಹೂ ವಲಿಯ್ಯುನ್ ಮಿನದ್ದುಲ್ಲಿ ವಕಬ್ಬಿರ್‌ಹು ತಕ್‌ಬೀರನ್-ಅಲ್ಲಾಹುಮ್ಮ ರಹ್ಮತಕ ಅರ್‌ಜೂ ಫಲಾ ತಕಿಲ್ನೀ ಇಲಾ ನಫ್ಸೀ ತರ್‌ಫತ ಐನಿನ್, ವಅಸ್ಲಿಹ್‌ಲೀ ಶಅ್‌ನೀ ಕುಲ್ಲಹು, ಲಾ ಇಲಾಹ ಇಲ್ಲಾ ಅಂತ. ಯಾ ಹಯ್ಯು ಯಾ ಕಯ್ಯೂಮ್ ಬಿರಹ್ಮತಿಕ ಅಸ್ತಗೀಸು. ಲಾ ಇಲಾಹ ಇಲ್ಲಾ ಅಂತ ಸುಬ್ಹಾನಕ ಇನ್ನೀ ಕುಂತು ಮಿನಝ್ಝಾಲಿಮೀನ್-ಅಲ್ಲಾಹುಮ್ಮ ಇನ್ನೀ ಅಬ್ದುಕ ವಬ್ನು ಅಬ್ದಿಕ ವಬ್ನು ಅಮತಿಕ, ನಾಸಿಯತೀ ಬಿಯದಿಕ, ಮಾದಿನ್ ಫೀ ಹುಕ್ಮುಕ, ಅದ್ಲುನ್ ಫೀಕದಾಉಕ, ಅಸ್‌ಅಲುಕ ಬಿಕುಲ್ಲಿ ಇಸ್ಮಿನ್ ಹುವ ಲಕ ಸಮ್ಮಯ್‌ತುಬಿಹೀ ನಫ್ಸಕ, ಅವ್ ಅನ್‌ಝಲ್ತಹೂ ಫೀ ಕಿತಾಬಿಕ ಅವ್ ಅಲ್ಲಮ್ತಹೂ ಅಹದನ್ ಮಿನ್ ಖಲ್ಕಿಕ, ಅವ್ ಇಸ್ತಅ್‌ಸರ್ತ ಬಿಹೀ ಫೀ ಇಲ್ಮಿಲ್ ಗೈಬಿ ಇಂದಕ ಅನ್

ತಜ್‌ಅಲಲ್ ಕುರ್‌ಆನ ರಬೀಅ ಕಲ್ಬೀ ವ ನೂರ ಬಸರೀ ವಜಲಾಅ ಹುಝ್ನೀ, ವದಹಾಬ ಹಮ್ಮೀ, ಲಾ ಹೌಲವಲಾ ಕುವ್ವತ ಇಲ್ಲಾ ಬಿಲ್ಲಾಹಿ"

ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಸನ್ಮಾನ್ಯನು, ಮಹೋನ್ನತನು, ಪರಮ ಪಾವನನು, ಸಮೃದ್ಧಿ ನೀಡುವವನು, ವಿಶ್ವಸಿಂಹಾಸನದ ಒಡೆಯನು. ಸರ್ವ ಲೋಕಗಳ ಪ್ರಭುವಾದ ಅಲ್ಲಾಹನಿಗೆ ಸರ್ವಸ್ತುತಿಸ್ತೋತ್ರಗಳು. ಮರಣ ಬಾಧಿಸದ ಸದಾ ಜೀವಂತನೂ ಆಗಿರುವ, ಸಕಲ ವಿಶ್ವವನ್ನು ಚಲಾಯಿಸುತ್ತಿರುವ ಅಲ್ಲಾಹನಿಗೆ ಸರ್ವಸ್ತುತಿಗಳು. ಆತನ ಮೇಲೆಯೇ ಭರವಸೆಯನ್ನಿರಿಸಿದೆ. ಎಲ್ಲ ಪ್ರಶಂಸೆಗಳು ಆತನಿಗೇ ಮೀಸಲು. ಆತನಿಗೆ ಯಾವ ಸಂತಾನವೂ ಇಲ್ಲ. ಆತನ ಅಧಿಕಾರದಲ್ಲಿ ಯಾರೂ ಪಾಲುದಾರರಿಲ್ಲ. ಆತನಿಗೆ ಯಾರೂ ಸಹಾಯಕರಿಲ್ಲ. ಆತ ದುರ್ಬಲನೂ ಅಲ್ಲ. ಹಿರಿತನ ಮತ್ತು ಮಹಾನತೆಗೆ ಆತನೇ ಅರ್ಹನೆಂದು ಚೆನ್ನಾಗಿ ಸಾರಿರಿ. ಓ ಅಲ್ಲಾಹ್! ನಾನು ನಿನ್ನ ಕರುಣೆಯ ಯಾಚಕನಾಗಿರುವೆ. ಕ್ಷಣ ಮಾತ್ರಕ್ಕೂ ನನ್ನನ್ನು ನನ್ನ ಚಿತ್ತದ ವಶಕ್ಕೊಪ್ಪಿಸದಿರು. ನನ್ನ ಎಲ್ಲ ವ್ಯವಹಾರಗಳನ್ನು ಸಂಸ್ಕರಿಸು. ನೀನಲ್ಲದೆ ಅನ್ಯ ಆರಾಧ್ಯರಿಲ್ಲ.

ಓ ಚಿರಂತನನೇ, ಸ್ವಯಂಸ್ಥಿರನೇ! ನಿನ್ನ ಕಾರುಣ್ಯದಿಂದಲೇ ನಾನು ಬೇಡುತ್ತೇನೆ. ನೀನಲ್ಲದೆ ಅನ್ಯ ಆರಾಧ್ಯರಿಲ್ಲ. ನೀನು ಎಲ್ಲ ದೌರ್ಬಲ್ಯಗಳಿಂದ ಪರಿಶುದ್ಧನಾಗಿರುವೆ. ಬಹುಶಃ ನಾನೇ ಅಕ್ರಮಿಗಳಲ್ಲಾಗಿದ್ದೇನೆ. ಓ ಅಲ್ಲಾಹ್! ನಾನು ನಿನ್ನ ದಾಸನೂ, ನಿನ್ನ ದಾಸ ಮತ್ತು ದಾಸಿಯ ಪುತ್ರನೂ ಆಗಿದ್ದೇನೆ. ನನ್ನ ಮಾನಮರ್ಯಾದೆಯು ನಿನ್ನ ವಶದಲ್ಲಿದೆ. ನನ್ನ ಬಗ್ಗೆ ನಿನ್ನ ಆಜ್ಞೆಯೇ ಜಾರಿಯಲ್ಲಿದೆ. ನನ್ನ ಬಗ್ಗೆ ನಿನ್ನ ಪ್ರತಿಯೊಂದು ಆಜ್ಞೆಯೂ ಸಾದ್ಯಂತ ನ್ಯಾಯಪೂರ್ಣವಾಗಿದೆ. ನೀನು ನಿನಗೆ ಇಟ್ಟುಕೊಂಡ, ನಿನ್ನ ಗ್ರಂಥದಲ್ಲಿ ಅವತೀರ್ಣಗೊಳಿಸಿದ, ನಿನ್ನ ಸೃಷ್ಟಿಗಳ ಪೈಕಿ ಯಾರಿಗಾದರೂ ಕಲಿಸಿದ ಅಥವಾ ನಿನ್ನ ಬಳಿ ರಹಸ್ಯವಾಗಿಯೇ ಇರಿಸಿದ ನಿನ್ನ ನಾಮದೊಂದಿಗೆ ನಿನ್ನಲ್ಲಿ ಬೇಡುತ್ತೇನೆ. ಕುರ್‌ಆನನ್ನು ನನ್ನ ಹೃದಯದ ಶಾಂತಿಯಾಗಿಯೂ ನನ್ನ ಕಣ್ಣಿನ ಕಾಂತಿಯಾಗಿಯೂ, ನನ್ನ ದುಃಖಗಳ ಪರಿಹಾರವಾಗಿಯೂ ನನ್ನ ವ್ಯಥೆಯ ಶಮನವಾಗಿಯೂ ಮಾಡಿಕೊಡಬೇಕೆಂದು ನಿನ್ನಲ್ಲಿ ಪ್ರಾರ್ಥಿಸುತ್ತೇನೆ. ಅಲ್ಲಾಹನ ಸಹಾಯವಿಲ್ಲದೆ ಯಾರಿಗೂ ಪಾಪಗಳಿಂದ ದೂರವುಳಿಯುವ ಮತ್ತು ಒಳಿತಿನ ಮಾರ್ಗದಲ್ಲಿ ನಡೆಯುವ ಸಾಮರ್ಥ್ಯವಿಲ್ಲ.

**(ನಸಾಈ, ಇಬ್ನು ಹಿಬ್ಬಾನ್, ಹಾಕಿಮ್, ತಿರ್ಮಿದಿ)**

11. ತನ್ನ ಅಧಿಕಾರದಲ್ಲಿಲ್ಲದ ಯಾವುದಾದರೂ ಘಟನೆ ಎದುರಾದಾಗ

قَدَّرَ اللّٰهُ وَمَا شَاءَ فَعَلَ۔

**"ಕದ್ದರಲ್ಲಾಹು ವಮಾಶಾಅ ಫಅಲ"**

ಅಲ್ಲಾಹನು ವಿಧಿಗೊಳಿಸಿದನು ಮತ್ತು ಬಯಸಿದ್ದನ್ನು ಮಾಡಿದನು.

**(ಹ. ಅಬೂಹುರೈರಾ(ರ)- ನಸಾಈ)**

ಹೀಗೆ ಆಗಿರುತ್ತಿದ್ದರೆ ನಮಗೆ ಈ ಸಂಕಷ್ಟ ಬರುತ್ತಿರಲಿಲ್ಲ ಎಂದು ಹೇಳಬೇಡಿ. ಅದರಿಂದ ಶೈತಾನನಿಗೆ ದಾರಿ ಮಾಡಿಕೊಟ್ಟಂತಾಗುತ್ತದೆ.

12. ಸಮಸ್ಯೆ ಎದುರಾದಾಗ ಈ ರೀತಿ ಹೇಳಿರಿ:

حَسْبُنَا اللّٰهُ وَ نِعْمَ الْوَكِيْلُ۔

"ಹಸ್ಬುನಲ್ಲಾಹು ವ ನಿಅ್‌ಮಲ್ ವಕೀಲ್" ನಮಗೆ ಅಲ್ಲಾಹನೇ ಸಾಕು ಮತ್ತು ಅವನೇ ಅತ್ಯುತ್ತಮ ಕಾರ್ಯ ಸಾಧಕನು. (ಹ. ಔಫ್ ಬಿನ್ ಮಾಲಿಕ್(ರ)-ಅಬೂದಾವುದ್)

13. ಸಂಕಷ್ಟದ ವೇಳೆ ಹೇಳುವ ದುಆ

اِنَّا لِلّٰهِ وَ اِنَّا اِلَيْهِ رَاجِعُوْنَ– اَللّٰهُمَّ عِنْدَكَ اَحْتَسِبُ مُصِيْبَتِىْ
فَأْجُرْنِىْ فِيْهَا وَ اَبْدِلْنِىْ مِنْهَا خَيْرًا۔

"ಇನ್ನಾ ಲಿಲ್ಲಾಹಿ ವ ಇನ್ನಾ ಇಲೈಹಿ ರಾಜಿಊನ್- ಅಲ್ಲಾಹುಮ್ಮ ಇಂದಕ ಅಹ್‌ತಸಿಬು ಮುಸೀಬತೀ ಫಅ್‌ಜುರ್‌ನೀ ಫೀಹಾ ವ ಅಬ್‌ದಿಲ್‌ನೀ ಮಿನ್ ಹಾ ಖೈರನ್"

ನಾವು ಅಲ್ಲಾಹನಿಗೆ ಸೇರಿದವರು. ಅವನಲ್ಲಿಗೇ ಮರಳಿ ಹೋಗಬೇಕಾದವರು. ಓ ಅಲ್ಲಾಹ್! ನಾನು ನನ್ನ ಸಂಕಷ್ಟದಲ್ಲಿ ನಿನ್ನಿಂದಲೇ ಪ್ರತಿಫಲದ ನಿರೀಕ್ಷೆಯನ್ನಿಟ್ಟಿದ್ದೇನೆ. ನೀನು ನನಗೆ ಅದರ ಪ್ರತಿಫಲವನ್ನು ದಯಪಾಲಿಸು ಮತ್ತು ಅದಕ್ಕೆ ಬದಲಾಗಿ ಒಳ್ಳೆಯದರ ಸೌಭಾಗ್ಯ ನೀಡು.

14. ಕಠಿಣ ಕೆಲಸ ಎದುರಾದಾಗ

اَللّٰهُمَّ لاَ سَهْلَ اِلَّا مَا جَعَلْتَهٗ سَهْلاً، وَاَنْتَ تَجْعَلُ الْحَزْنَ اِذَا
شِئْتَ سَهْلاً۔

"ಅಲ್ಲಾಹುಮ್ಮ ಲಾ ಸಹ್ಲ ಇಲ್ಲಾ ಮಾ ಜಅಲ್ತಹೂ ಸಹ್ಲನ್, ವ ಅಂತ ತಜ್‌ಅಲುಲ್ ಹಝ್ನ ಇದಾ ಶಿಅ್‌ತ ಸಹ್ಲನ್"

ಓ ಅಲ್ಲಾಹ್! ನಿನ್ನ ಇಚ್ಛೆಯ ಹೊರತು ಯಾವ ಕೆಲಸವೂ ಸುಲಭವಲ್ಲ. ನೀನಿಚ್ಛಿಸಿದರೆ ಕಾಠಿಣ್ಯವನ್ನು ಸುಲಭಗೊಳಿಸುವಿ. (ಹ. ಅನಸ್(ರ) - ಇಬ್ನು ಹಿಬ್ಬಾನ್)

15. ಕೋಪಗೊಂಡಾಗ

اَعُوْذُ بِاللّٰهِ مِنَ الشَّيْطٰنِ الرَّجِيْمِ۔

"ಅಊದುಬಿಲ್ಲಾಹಿ ಮಿನಶ್ಶೈತಾನಿರ್ರಜೀಮ್"

ಶಪಿತ ಶೈತಾನನ ಉಪಟಳದಿಂದ ಅಲ್ಲಾಹನ ಅಭಯ ಯಾಚಿಸುತ್ತೇನೆ.

(ಹ. ಸುಲೈಮಾನ್ ಬಿನ್ ಸುರ್‌ವ(ರ)- ಬುಖಾರಿ, ಮುಸ್ಲಿಮ್)

16. ಸಾಲದಲ್ಲಿ ಸಿಲುಕಿದಾಗ ಈ ಪದಗಳಿಂದ ಪ್ರಾರ್ಥಿಸಬೇಕು.

اَللّٰهُمَّ اكْفِنِيْ بِحَلَالِكَ عَنْ حَرَامِكَ وَاغْنِنِيْ بِفَضْلِكَ عَمَّنْ سِوَاكَ.

"ಅಲ್ಲಾಹುಮ್ಮ ಕ್‌ಫಿನೀ ಬಿಹಲಾಲಿಕ ಅನ್ ಹರಾಮಿಕ ವಗ್‌ನಿನೀ ಬಿಫದ್‌ಲಿಕ ಅಮ್ಮನ್ ಸಿವಾಕ"

ಓ ಅಲ್ಲಾಹ್! ನನಗೆ ಧರ್ಮಬದ್ಧ ಜೀವನಾಧಾರವನ್ನು ಕರುಣಿಸು. ನಿಷಿದ್ಧವಾದವುಗಳಿಂದ ನನ್ನನ್ನು ರಕ್ಷಿಸು. ನಿನ್ನ ಅಪಾರ ಔದಾರ್ಯದಿಂದ ನನ್ನನ್ನು ನಿರಪೇಕ್ಷನಾಗಿಸು.

(ಹ. ಅಲೀ(ರ)- ತಿರ್ಮಿದಿ, ಹಾಕಿಮ್)

## ರೋಗ, ಸಂದರ್ಶನ ಮತ್ತು ಸಂತಾಪಗಳ ದುಆ

1. ದೇಹದ ಯಾವುದಾದರೊಂದು ಭಾಗಕ್ಕೆ ನೋವಾಯಿತು ಎಂದಾದರೆ ಅದರ ಮೇಲೆ ಕೈ ಇಟ್ಟು ಮೂರು ಸಲ ಬಿಸ್ಮಿಲ್ಲಾಹ್ ಹೇಳಿರಿ ಮತ್ತು ಏಳು ಸಲ ಈ ದುಆ ಪಠಿಸಿರಿ.

اَعُوْذُ بِعِزَّةِ اللّٰهِ وَ قُدْرَتِهٖ مِنْ شَرِّ مَا اَجِدُ وَاُحَاذِرُ۔

"ಅಊದು ಬಿಇಝ್ಝತಿಲ್ಲಾಹಿ ವಕುದ್‌ರತಿಹೀ ಮಿನ್ ಶರ್ರಿ ಮಾ ಅಜಿದು ವಉಹಾದಿರು"

ನನಗೆ ಅನುಮಾನವಿರುವ, ನನ್ನ ಮೇಲೆ ಆವರಿಸಿರುವ, ಈ ಕೇಡಿನಿಂದ ನಾನು ಅಲ್ಲಾಹನ ಮಹಾನತೆಯ ಮೂಲಕ ಅಭಯ ಯಾಚಿಸುತ್ತೇನೆ.

(ಹ. ಉಸ್ಮಾನ್ ಬಿನ್ ಅಬೀ ಆಸ್(ರ)- ಮುಸ್ಲಿಮ್)

2. ರೋಗಿಯ ಸಂದರ್ಶನಕ್ಕೆ ಹೋದಾಗ ರೋಗಿಗೆ ಸಾಂತ್ವನ ಹೇಳಿ ಈ ರೀತಿ ದುಆ ಮಾಡಿ.

اَللّٰهُمَّ اَذْهِبِ الْبَاسَ رَبَّ النَّاسِ، اِشْفِ وَ اَنْتَ الشَّافِيْ، لَا شِفَاءَ اِلَّا شِفَاؤُكَ شِفَاءً لَا يُغَادِرُ سَقَمًا۔

"ಅಲ್ಲಾಹುಮ್ಮ ಅದ್‌ಹಿಬಿಲ್ ಬಅ್‌ಸ ರಬ್ಬನ್ನಾಸಿ ಇಶ್‌ಫಿ ವ ಅಂತ ಶ್ಶಾಫೀ. ಲಾ ಶಿಫಾಅ ಇಲ್ಲಾ ಶಿಫಾಉಕ ಶಿಫಾಅನ್ ಲಾ ಯುಗಾದಿರು ಸಕಮಾ"

ಓ ಅಲ್ಲಾಹ್! ಓ ಮನುಷ್ಯರ ಪ್ರಭೂ! ಈ ಸಂಕಷ್ಟವನ್ನು ನೀಗಿಸು. ಇವನನ್ನು ಗುಣಪಡಿಸು. ಗುಣಪಡಿಸುವವನು ನೀನು ಮಾತ್ರ. ನಿನ್ನ ಹೊರತು ಯಾರಿಂದಲೂ ಗುಣಪಡಿಸಲು ಸಾಧ್ಯವಿಲ್ಲ. ಕಾಯಿಲೆಯ ಕುರುಹು ಇಲ್ಲದಂತೆ ಗುಣಪಡಿಸು!

(ಹ. ಆಯಿಶಾ(ರ)- ಬುಖಾರಿ)

3. ಸಂತಾಪ ಸೂಚಿಸಲು ಹೋದಾಗ ಸಲಾಮ್ ಹೇಳಿ ಈ ರೀತಿ ಸಂತಾಪ ಹೇಳಿರಿ

اِنَّ لِلّٰهِ مَا اَخَذَ وَلَهُ مَا اَعْطٰى وَكُلُّ شَيْءٍ عِنْدَهُ بِاَجَلٍ مُسَمًّى فَلْتَصْبِرْ وَلْتَحْتَسِبْ۔

"ಇನ್ನಲಿಲ್ಲಾಹಿ ಮಾ ಅಖದ ವಲಹು ಮಾ ಅತಾ ವಕುಲ್ಲು ಶೈಇನ್ ಇಂದಹು ಬಿಅಜಲಿನ್ ಮುಸಮ್ಮನ್ ಫಲ್‌ತಸ್‌ಬಿರ್ ವಲ್‌ತಹ್‌ತಸಿಬ್"

ನಾವೆಲ್ಲರೂ ಅಲ್ಲಾಹನ ಒಡೆತನದಲ್ಲಿರುವವರು. ಆತ ಮರಳಿ ಪಡೆದುಕೊಂಡಿರುವುದೂ ಆತನದೇ. ಆತ ದಯಪಾಲಿಸಿರುವುದೂ ಆತನದೇ. ಆತ ಪ್ರತಿಯೊಬ್ಬನಿಗೂ ಒಂದು ಅವಧಿಯನ್ನು ಕೊಟ್ಟಿದ್ದಾನೆ. ಆದ್ದರಿಂದ ನೀವು ಸಹನೆ ವಹಿಸಬೇಕು. ಅಲ್ಲಾಹನ ಪ್ರತಿಫಲದ ನಿರೀಕ್ಷೆಯನ್ನಿರಿಸಬೇಕು. (ಹ. ಅಸ್ಮಾ(ರ)-ಬುಖಾರಿ)

4. ಹ. ಮುಆದ್ ಬಿನ್ ಜಬಲ್‌ರ(ರ) ಪುತ್ರಿ ನಿಧನರಾದಾಗ ಪ್ರವಾದಿಯವರು(ಸ) ಅವರಿಗೆ ಈ ರೀತಿ ಸಂತಾಪ ಸೂಚಕ ಪತ್ರ ಕಳುಹಿಸಿದ್ದರು.

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ ಈ ಪತ್ರವನ್ನು ಆರಂಭಿಸುತ್ತೇನೆ. ಅಲ್ಲಾಹನ ಪ್ರವಾದಿ ಮುಹಮ್ಮದ್‌ರಿಂದ(ಸ) ಮುಆದ್ ಬಿನ್ ಜಬಲ್‌ರಿಗೆ, ನಿಮ್ಮ ಮೇಲೆ ಶಾಂತಿ ಇರಲಿ. ಸರ್ವಸ್ತುತಿ ಸ್ತೋತ್ರಗಳು ಅಲ್ಲಾಹನಿಗಾಗಿವೆ, ಆತನ ಹೊರತು ಆರಾಧನೆಗೆ ಯಾರೂ ಅರ್ಹರಲ್ಲ ಎಂದು ಬರೆದು ಕಳುಹಿಸುತ್ತಿದ್ದೇನೆ. ತರುವಾಯ ಅಲ್ಲಾಹನು ನಿಮ್ಮ ಪ್ರತಿಫಲವನ್ನು ಹೆಚ್ಚಿಸಲಿ ಮತ್ತು ನಿಮ್ಮ ಮನಸ್ಸಿಗೆ ಸಹನೆ ನೀಡಲಿ. ನನಗೂ ನಿಮಗೂ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುವ ಸೌಭಾಗ್ಯ ಕರುಣಿಸಲಿ. ಖಂಡಿತವಾಗಿಯೂ ನಮ್ಮ ಜೀವ-ಸೊತ್ತುಗಳು, ನಮ್ಮ ಮನೆ-ಸಂತಾನಗಳು ಎಲ್ಲವೂ ಮಹಾ ಮಹಿಮನಾದ ಅಲ್ಲಾಹನ ಕೊಡುಗೆಗಳು. ಈ ಕೊಡುಗೆಗಳನ್ನೇ ತಾತ್ಕಾಲಿಕವಾಗಿ ನಮ್ಮ ಪಾಲಿಗೆ ನೀಡಲಾಗಿದೆ. ನಾವು ಅದರಿಂದ ಒಂದು ನಿಶ್ಚಿತ ಅವಧಿಯ ತನಕ ಪ್ರಯೋಜನ ಪಡೆಯುತ್ತೇವೆ. ನಿಶ್ಚಿತಾವಧಿಯ ಬಳಿಕ ಅಲ್ಲಾಹನು ಅದನ್ನು ಮರಳಿ ಪಡೆಯುತ್ತಾನೆ. ಈ ಕೊಡುಗೆಗಳನ್ನು ಕರುಣಿಸಿದುದಕ್ಕಾಗಿ ಕೃತಜ್ಞತೆ ಸಲ್ಲಿಸುವುದು ಕಡ್ಡಾಯವಾಗಿದೆ. ಆತ ಪರೀಕ್ಷಿಸುವಾಗ ಸಹನೆ ವಹಿಸುವುದು ನಿರ್ಬಂಧವಾಗಿದೆ.

ಯಾವುದೇ ಕಷ್ಟವಿಲ್ಲದೇ ನಿಮಗೆ ಲಭಿಸಿದ ನಿಮ್ಮ ಪುತ್ರಿಯೂ ಅಲ್ಲಾಹನ ಕೊಡುಗೆ ಯಾಗಿದೆ. ಅದು ನಿಮ್ಮ ಒಡಲಿಗೆ ಕೊಟ್ಟಂತಹ ಅಲ್ಲಾಹನ ಅಮಾನತ್ತಾಗಿತ್ತು. ಆತನು ನಿಮಗೆ ಅಭ್ಯುದಯ(ಸೌಭಾಗ್ಯ) ಮತ್ತು ಸಂತಸದಿಂದ ಅದರಿಂದ ಪ್ರಯೋಜನ ಪಡೆಯು ವಂತಹ ಸಂದರ್ಭ ಒದಗಿಸಿದನು. ಆ ಬಳಿಕ ಆತನು ನಿಮ್ಮಿಂದ ತನ್ನ ಆ ಅಮಾನತ್ತನ್ನು ಮರಳಿ ಪಡೆದನು ಮತ್ತು ಅದರ ಬದಲಿಗೆ ಅತ್ಯಧಿಕ ಪ್ರತಿಫಲ ದಯಪಾಲಿಸಿದನು. ನೀವು ಅದರ ಪ್ರತಿಫಲದ ಆಕಾಂಕ್ಷಿಯಾಗಿ ಸಹನೆ ವಹಿಸಿದರೆ ನಿಮಗೆ ಆತನ ಕೃಪೆ, ಆತನ ವತಿಯಿಂದ ಸುರಕ್ಷೆ ಹಾಗೂ ಸನ್ಮಾರ್ಗದರ್ಶನ ಲಭಿಸುವುದು. ಈಗ ನೀವು ಸಹನೆಯನ್ನು ಕೈಚೆಲ್ಲಬೇಡಿರಿ. ನಿಮ್ಮ ಅಲ್ಪಸಮಯದ ಅಸಹನೆಯು ನಿಮ್ಮ ಪ್ರತಿಫಲವನ್ನು ವ್ಯರ್ಥ ಗೊಳಿಸಿ ನೀವು ಪರಿತಪಿಸುವಂತಾಗಬಾರದು. ನೆನಪಿರಲಿ, ನಿಮ್ಮ ಅಸಹನೆಯಿಂದ ಕಳಕೊಂಡ ವಸ್ತು ಮರಳಿ ಬರಲಾರದು. ನಿಮ್ಮ ದುಃಖವೂ ದೂರವಾಗದು. ಏನು ಆಗಬೇಕಾಗಿತ್ತೋ ಅದು ಸಂಭವಿಸಿದೆ- ವಸ್ಸಲಾಮ್.

(ಹಾಕಿಮ್, ಇಬ್ನು ಮರ್ದೂಯ)

5. ಜನಾಝಾ ನಮಾಝ್‌ನಲ್ಲಿ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ اغْفِرْلَهُ وَارْحَمْهُ، وَ عَافِهٖ وَاعْفُ عَنْهُ، وَاَكْرِمْ نُزُلَهُ،
وَوَسِّعْ مَدْخَلَهُ، وَاغْسِلْهُ بِالْمَاءِ وَالثَّلْجِ وَالْبَرَدِ، وَنَقِّهٖ مِنَ
الْخَطَايَا كَمَا نَقَّيْتَ الثَّوْبَ الْاَبْيَضَ مِنَ الدَّنَسِ، وَاَبْدِلْهُ
دَارًا خَيْرًا مِّنْ دَارِهٖ وَاَهْلاً خَيْرًا مِّنْ اَهْلِهٖ، وَزَوْجًا خَيْرًا مِّنْ
زَوْجِهٖ، وَاَدْخِلْهُ الْجَنَّةَ وَاَعِذْهُ مِنْ عَذَابِ الْقَبْرِ اَوْ مِنْ
عَذَابِ النَّارِ۔

"ಅಲ್ಲಾಹುಮ್ಮಗ್ ಫಿರ್‌ಲಹೂ ವರ್‌ಹಮ್‌ಹೂ, ವಆಫಿಹೀ ವಅ್‌ಫು ಅನ್‌ಹು, ವಅಕ್ರಿಮ್ ನುಝುಲಹೂ, ವ ವಸ್ಸಿಲ್ ಮದ್‌ಖಲಹೂ, ವಗ್ಸಿಲ್‌ಹು ಬಿಲ್‌ಮಾಇ ವಸ್ಸಲ್‌ಜಿ ವಲ್ ಬರ್ದಿ, ವನಕ್ಕಿಹೀ ಮಿನಲ್ ಖತಾಯಾ ಕಮಾ ನಕ್ಕೈತ ಸ್ಸೌಬಲ್ ಅಬ್‌ಯದ ಮಿನದ್ದನಸಿ, ವಅಬ್‌ದಿಲ್‌ಹೂ ದಾರನ್ ಖೈರಂಮಿನ್ ದಾರಿಹೀ ವಅಹ್‌ಲನ್ ಖೈರಂ ಮಿನ್ ಅಹ್ಲಿಹೀ, ವಝೌಜನ್ ಖೈರಂ ಮಿನ್ ಝೌಜಿಹೀ ವಅದ್‌ಖಿಲ್‌ಹುಲ್ ಜನ್ನತ ವಇದ್‌ಹು ಮಿನ್ ಅದಾಬಿಲ್ ಕಬ್ರಿ ಅವ್ ಮಿನ್ ಅದಾಬಿನ್ನಾರ್"

ಓ ಅಲ್ಲಾಹ್! ಇವನಿಗೆ (ಈ ಮೃತನಿಗೆ) ಕ್ಷಮೆ ನೀಡು. ಇವನ ಮೇಲೆ ಕರುಣೆ ತೋರು, ಇವನ ಪಾಪಗಳನ್ನು ಮನ್ನಿಸು. ಇವನನ್ನು ನೀನು ಗೌರವಪೂರ್ಣವಾಗಿ ಸತ್ಕರಿಸು. ಇವನ ಗೋರಿಯನ್ನು ವಿಶಾಲಗೊಳಿಸು. ಇವನನ್ನು ನೀರು, ಮಂಜು ಮತ್ತು ಇಬ್ಬನಿಯಿಂದ ಸ್ನಾನ ಮಾಡಿಸಿ ಪಾಪಗಳಿಂದ ಮುಕ್ತಗೊಳಿಸು (ಅರ್ಥಾತ್ ಅಗಣಿತ ಅನುಗ್ರಹಗಳನ್ನು ಸುರಿಸು)- ನೀನು ಬಿಳಿಬಟ್ಟೆಯನ್ನು ಕೊಳೆ ಕಲ್ಮಷಗಳಿಂದ ನಿರ್ಮಲಗೊಳಿಸಿದಂತೆ. ಇವನಿಗೆ ಲೋಕದಲ್ಲಿದ್ದ ಮನೆಗಿಂತಲೂ ಉತ್ತಮವಾದ ಒಂದು ಮನೆ, ಇವನ (ಇಹಲೋಕದ) ಕುಟುಂಬಕ್ಕಿಂತ ಉತ್ತಮ ಕುಟುಂಬ, ಇಹಲೋಕದ ಸಂಗಾತಿಗಿಂತ ಉತ್ತಮ ಸಂಗಾತಿಯನ್ನೂ ದಯಪಾಲಿಸು. ಇವನನ್ನು ಸ್ವರ್ಗದಲ್ಲಿ ಪ್ರವೇಶಗೊಳಿಸು. ಇವನನ್ನು ಗೋರಿ ಯಾತನೆಯಿಂದಲೂ ನರಕದ ಶಿಕ್ಷೆಯಿಂದಲೂ ರಕ್ಷಿಸು.

(ಔಫ್ ಬಿನ್ ಮಾಲಿಕ್(ರ) - ಮುಸ್ಲಿಮ್)

## ಗೋರಿ ಸಂದರ್ಶಿಸುವಾಗ

اَلسَّلَامُ عَلَيْكُمْ اَهْلَ الدِّيَارِ مِنَ الْمُؤْمِنِيْنَ وَالْمُسْلِمِيْنَ، وَيَرْحَمُ اللّٰهُ الْمُسْتَقْدِمِيْنَ مِنْكُمْ وَالْمُسْتَأْخِرِيْنَ، وَ اِنَّا اِنْ شَآءَ اللّٰهُ بِكُمْ لَاحِقُوْنَ، اَسْأَلُ اللّٰهَ لَنَا وَلَكُمُ الْعَافِيَةَ، اَنْتُمْ لَنَا فَرَطٌ وَ نَحْنُ لَكُمْ تَبَعٌ، اَللّٰهُمَّ لَا تَحْرِمْنَا اَجْرَهُمْ، وَلَا تُضِلَّنَا بَعْدَهُمْ.

"ಅಸ್ಸಲಾಮು ಅಲೈಕುಮ್ ಅಹ್ಲದ್ದಿಯಾರಿ ಮಿನಲ್ ಮುಅ್‌ಮಿನೀನ ವಲ್ ಮುಸ್ಲಿಮೀನ. ವ ಯರ್‌ಹಮುಲ್ಲಾಹುಲ್ ಮುಸ್‌ತಕ್ದಿಮೀನ ಮಿನ್‌ಕುಮ್ ವಲ್ ಮುಸ್‌ತಅ್‌ಖಿರೀನ ವ ಇನ್ನಾ ಇನ್‌ಶಾ ಅಲ್ಲಾಹು ಬಿಕುಮ್ ಲಾಹಿಕೂನ್, ಅಸ್ ಅಲುಲ್ಲಾಹ ಲನಾ ವಲಕುಮುಲ್ ಆಫಿಯಃ, ಅನ್‌ತುಮ್ ಲನಾ ಫರತುನ್ ವನಹ್‌ನು ಲಕುಮ್ ತಬಉನ್, ಅಲ್ಲಾಹುಮ್ಮ ಲಾ ತಹ್ರಿಮ್ನಾ ಅಜ್ರಹುಮ್, ವಲಾ ತುದಿಲ್ಲನಾ ಬಅ್‌ದಹುಮ್"

ಈ ನಗರದ ವಾಸಿಗಳಾದ ಅನುಸರಣ ಶೀಲ ಸತ್ಯವಿಶ್ವಾಸಿಗಳೇ! ನಿಮ್ಮ ಮೇಲೆ ಶಾಂತಿಯಿರಲಿ. ನಮಗಿಂತ ಮೊದಲು ಹೋದವರ ಮತ್ತು ಹಿಂದೆ ಉಳಿದವರ ಮೇಲೆ ಅಲ್ಲಾಹನು ಕರುಣೆ ತೋರಲಿ. ಅಲ್ಲಾಹನು ಬಯಸಿದಾಗ ನಾವೂ ನಿಮ್ಮನ್ನು ಬಂದು ಸೇರಲಿದ್ದೇವೆ. ನಾವು ಅಲ್ಲಾಹನಿಂದ ನಮಗಾಗಿಯೂ ನಿಮಗಾಗಿಯೂ ಕ್ಷೇಮವನ್ನು ಬಯಸುತ್ತೇವೆ.

ಓ ಅಲ್ಲಾಹ್! ನಮ್ಮನ್ನು ಇವರ ಪ್ರತಿಫಲದಿಂದ ವಂಚಿತಗೊಳಿಸದಿರು ಮತ್ತು ಇವರ ಬಳಿಕ ನಮ್ಮನ್ನು ಪಥಭ್ರಷ್ಟಗೊಳಿಸದಿರು. (ಮುಸ್ಲಿಮ್, ನಸಾಈ, ಇಬ್ನು ಮಾಜಃ)

## ತಸ್ಬೀಹ್ ನಮಾಝ್

ತಸ್ಬೀಹ್ ನಮಾಝ್ ನಾಲ್ಕು ರಕಅತ್‌ಗಳಾಗಿವೆ. ಅವುಗಳನ್ನು ಒಂದು ಸಲಾಮ್ ಅಥವಾ ಎರಡು ಸಲಾಮ್‌ನೊಂದಿಗೆ ನಿರ್ವಹಿಸಬಹುದು. ಪ್ರತಿಯೊಂದು ರಕಅತ್‌ನಲ್ಲೂ ಸೂರಃ ಫಾತಿಹಾ ಮತ್ತು ಅದರೊಂದಿಗೆ ಬೇರೆ ಯಾವುದಾದರೊಂದು ಸೂರ ಪಠಿಸಿದ ಬಳಿಕ 15 ಸಲ ಈ ತಸ್ಬೀಹ್ (ಜಪ) ಪಠಿಸಬೇಕು.

سُبْحَانَ اللّٰهِ وَالْحَمْدُ لِلّٰهِ وَلَآ اِلٰـهَ اِلَّا اللّٰهُ وَاللّٰهُ اَكْبَرُ ۔

"ಸುಬ್ಹಾನಲ್ಲಾಹಿ ವಲ್‌ಹಮ್ದುಲಿಲ್ಲಾಹಿ ವಲಾ ಇಲಾಹ ಇಲ್ಲಾಲ್ಲಾಹು ವಲ್ಲಾಹು ಅಕ್ಬರ್"

ಅಲ್ಲಾಹನು ಪರಿಶುದ್ಧನು. ಪ್ರಶಂಸೆಗಳೆಲ್ಲ ಅಲ್ಲಾಹನಿಗಾಗಿವೆ. ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ಅಲ್ಲಾಹನೇ ಮಹಾನನು.

ತರುವಾಯ ರುಕೂಅ್(ಬಾಗುವಿಕೆ), ಸಾಷ್ಟಾಂಗ (ಸುಜೂದ್), ಜಲ್ಸ (ಎರಡು ಸಾಷ್ಟಾಂಗಗಳ ಮಧ್ಯೆ ಕುಳಿತುಕೊಳ್ಳುವಿಕೆ) ಪುನಃ ಎರಡನೇ ಸಾಷ್ಟಾಂಗ, ಆ ಬಳಿಕ ಎದ್ದೇಳುವ ಮೊದಲು ಅಥವಾ ಎರಡನೇ ರಕಅತ್‌ನಲ್ಲಿ ತಶಹ್ಹುದ್‌ನ ಬಳಿಕ ತಲಾ ಹತ್ತು ಸಲ ಈ ತಸ್ಬೀಹನ್ನು ಪಠಿಸಬೇಕು. ಇದೇ ರೀತಿ ಒಂದು ರಕಅತ್‌ನಲ್ಲಿ 75 ಮತ್ತು ನಾಲ್ಕು ರಕಅತ್‌ನಲ್ಲಿ 300 ಆಗುವುದು. ಉಳಿದ ರಕಅತ್‌ಗಳನ್ನು ಕೂಡ ಮೊದಲಿನ ರಕಅತ್ ನಂತೆ ನಿರ್ವಹಿಸಬೇಕು.

(ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) - ಅಬೂದಾವೂದ್, ಹಾಕಿಮ್)

